# ತೈತ್ತಿರೀಯೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು

# ಪ್ರಸ್ತಾವನೆ

ಯಜ್ಞಯಾಗಾದಿ ಕರ್ಮಗಳಿಗೋಸ್ಕರವೇ ಪ್ರವೃತ್ತವಾದ ಯಜುರ್ವೇದವು ಶುಕ್ಲಯಜುರ್ವೇದವೆಂದೂ ಕೃಷ್ಣಯಜುರ್ವೇದವೆಂದೂ ಎರಡು ಭಾಗವಾಗಿದೆ. ಶುಕ್ಲಯಜುರ್ವೇದಕ್ಕೆ ವಾಜಸನೇಯಸಂಹಿತೆಯೂ ಕೃಷ್ಣಯಜುರ್ವೇದಕ್ಕೆ ತೈತ್ತಿರೀಯಸಂಹಿತೆಯೂ ಮುಖ್ಯ ಶಾಖೆಗಳಾಗಿವೆ.

ಕೃಷ್ಣದ್ವೈಪಾಯನ ವೇದವ್ಯಾಸರು ವೇದಸಮೂಹವನ್ನು ಋಗ್ವೇದ ಯಜುರ್ವೇದ ಸಾಮವೇದ ಮತ್ತು ಅಥರ್ವವೇದ ಎಂದು ನಾಲ್ಕು ಭಾಗಗಳನ್ನಾಗಿ ಮಾಡಿ ಅವುಗಳನ್ನು ತಮ್ಮ ಶಿಷ್ಯರಾದ ಪೈಲ, ವೈಶಂಪಾಯನ, ಜೈಮಿನಿ ಮತ್ತು ಸುಮಂತು ಇವರಿಗೆ ಕ್ರಮವಾಗಿ ಉಪದೇಶಿಸಿದರು. ವೈಶಂಪಾಯನರು ತಮಗೆ ಬಂದ ಯಜುರ್ವೇದವನ್ನು ಯಾಜ್ಞವಲ್ಕ್ಯರೇ ಮೊದಲಾದ ಶಿಷ್ಯರಿಗೆ ಉಪದೇಶಿಸಿದರು. ಯಾವುದೊ ಒಂದು ಸಂದರ್ಭದಲ್ಲಿ ವೈಶಂಪಾಯನರಿಗೆ ಯಾಜ್ಞವಲ್ಕ್ಯರ ಮೇಲೆ ಕೋಪವುಂಟಾಗಿ ಅವರು ಕಲಿತಿರುವ ವೇದವನ್ನು ಹಿಂದಕ್ಕೆ ಕೊಟ್ಟುಬಿಡುವಂತೆ ಆಜ್ಞಾಪಿಸಿದರು. ಯಾಜ್ಞವಲ್ಕ್ಯರು ತಮ್ಮ ತಪೋಬಲದಿಂದ ವೇದವನ್ನು ವಮನಮಾಡಿದರು. ಆಚಾರ್ಯರ ಆಜ್ಞೆಯ ಪ್ರಕಾರ ಅವರ ಇತರ ಶಿಷ್ಯರು ತಿತ್ತಿರಿ ಪಕ್ಷಿಗಳ ರೂಪವನ್ನು ತಾಳಿ ವಮನಮಾಡಿದ ಆ ವೇದವನ್ನೇ ಸ್ವೀಕರಿಸಿದರು. ಆದುದರಿಂದ ಕೃಷ್ಣಯಜುರ್ವೇದವು ತೈತ್ತಿರೀಯಸಂಹಿತೆಯೆಂದು ಪ್ರಸಿದ್ಧವಾಯಿತು. ಅನಂತರ ಮಹಾತೇಜಸ್ವಿಗಳಾದ ಯಾಜ್ಞವಲ್ಕ್ಯರು ಎದೆಗುಂದದೆ ಸೂರ್ಯನನ್ನು ಉಪಾಸಿಸಿ ಅವನ ಅನುಗ್ರಹವನ್ನು ಹೊಂದಿದರು. ಸೂರ್ಯನು ವಾಜಿರೂಪದಿಂದ (ಎಂದರೆ ಅಶ್ವರೂಪದಿಂದ) ಬಂದು ಯಜುರ್ವೇದವನ್ನು ಪುನಃ ಉಪದೇಶಮಾಡಿದನು. ದೇದೀಪ್ಯಮಾನನಾದ ಸೂರ್ಯನಿಂದ ಉಪದಿಷ್ಟವಾದುದರಿಂದ ಶುಕ್ಲಯಜುರ್ವೇದವೆಂದೂ, ವಾಜಿಯಿಂದ ಉಪದೇಶಿಸಲ್ಪಟ್ಟುದರಿಂದ ವಾಜಸನೇಯಸಂಹಿತೆಯೆಂದೂ ಅದು ಪ್ರಸಿದ್ಧವಾಯಿತು. ಈ ಕಥೆಯು ಮಹಾಭಾರತದಲ್ಲಿಯೂ (೧೨, ೩೯) ಮತ್ತು ವಿಷ್ಣುಪುರಾಣದಲ್ಲಿಯೂ (೩, ೫) ಸ್ವಾರಸ್ಯವಾಗಿ ವಿವರಿಸಲ್ಪಟ್ಟಿದೆ ಕೃಷ್ಣಯಜುರ್ವೇದವು ಶುಕ್ಲಯಜುರ್ವೇದಕ್ಕಿಂತ ಪ್ರಾಚೀನವೆಂದು ಅನೇಕ ಪಂಡಿತರ ಮತ.

ಕೃಷ್ಣಯಜುರ್ವೇದದ ತೈತ್ತಿರೀಯಶಾಖೆಯು ಸಂಹಿತೆ, ಬ್ರಾಹ್ಮಣ, ಆರಣ್ಯಕ ಇವುಗಳಿಂದ ಕೂಡಿದೆ. ತೈತ್ತಿರೀಯಾರಣ್ಯಕದ ಏಳನೆಯ ಎಂಟನೆಯ ಒಂಬತ್ತನೆಯ ಪ್ರಪಾಠಕಗಳೇ ಶೀಕ್ಷಾವಲ್ಲೀ, ಆನಂದವಲ್ಲೀ, ಭೃಗುವಲ್ಲೀ ಎಂಬ ವಲ್ಲೀತ್ರಯುವನ್ನು ಒಳಗೊಂಡಿರುವ ತೈತ್ತಿರೀಯೋಪನಿಷತ್ತು. ಹತ್ತನೆಯ ಪ್ರಪಾಠಕವೇ ಯಾಜ್ಞಿಕೀ ಅಥವಾ ಮಹಾನಾರಾಯಣೋಪ ನಿಷತ್ತು ಎಂದು ಪ್ರಸಿದ್ಧವಾಗಿದೆ. ಅಧ್ಯಯನದ ಸೌಕರ್ಯಕ್ಕಾಗಿ ಪ್ರತಿ ಯೊಂದು ವಲ್ಲಿಯಲ್ಲಿಯೂ ಸಣ್ಣ ಸಣ್ಣ ಅನುವಾಕಗಳಿವೆ. ತೈತ್ತಿರೀಯ ಶಾಖೆಯುವರು ಅಧಿಕಸಂಖ್ಯೆಯುಳ್ಳ ದಕ್ಷಿಣಭಾರತದಲ್ಲಿ ತೈತ್ತಿರೀಯೋಪ ನಿಷತ್ತು ಅತ್ಯಂತ ಪ್ರಸಿದ್ಧವೂ ಆದರಣೀಯವೂ ಆಗಿದೆ.

## ಶೀಕ್ಷಾವಲ್ಲೀ

ಶಾಂತಿಪಾಠದಿಂದಲೇ ಮೊದಲನೆಯ ಅನುವಾಕವು ಪ್ರಾರಂಭವಾಗಿದೆ. ಎರಡನೆಯ ಅನುವಾಕದಲ್ಲಿ ವರ್ಣಾದಿಗಳ ಉಚ್ಚಾರವನ್ನು ನಿರೂಪಿಸಿದೆ. ಉಪನಿಷದ್ವಾಕ್ಯಗಳಿಗೆ ಅರ್ಥಜ್ಞಾನವೇ ಮುಖ್ಯವಾಗಿದ್ದರೂ ಗ್ರಂಥಪಾಠದಲ್ಲಿ ಉದಾಸೀನತೆ ಇರಕೂಡದು. ವರ್ಣ ಸ್ವರ ಮಾತ್ರೆ ಮೊದಲಾದುವುಗಳ ಮೇಲೆ ಲಕ್ಷ್ಯವಿದ್ದರೆ ಅರ್ಥವು ಪಾಠಕನಿಗೆ ಹೊಳೆಯುವುದು. ಮೂರನೆಯ ಅನುವಾಕ ದಲ್ಲಿ ಸಂಹಿತಾವಿಷಯುವಾದ ಉಪಾಸನೆಯನ್ನು ಹೇಳಿದೆ. ಸಾಮಾನ್ಯವಾಗಿ ಅಧ್ಯಯನಮಾಡುವಾಗ ಬುದ್ಧಿಯು ಗ್ರಂಥಭಾವಿತವಾಗಿರುತ್ತದೆ; ಅದನ್ನು ತಕ್ಷಣವೇ ಅರ್ಥಜ್ಞಾನಕ್ಕೆ ಇಳಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಸಾಧಕನ ಧ್ಯಾನಸೌಕರ್ಯಕ್ಕಾಗಿ ಲೋಕ, ಜ್ಯೋತಿಸ್ಸು ಮೊದಲಾದ ಐದು ಆಶ್ರಯಗಳಲ್ಲಿ ಉಪಾಸನೆಯನ್ನು ಹೇಳಿದೆ. ನಾಲ್ಕನೆಯ ಅನುವಾಕದಲ್ಲಿ ಶ್ರೀಕಾಮ, ಮೇಧಾಕಾಮ ಮೊದಲಾದವರಿಗೆ ವಿವಿಧ ಜಪಹೋಮಗಳನ್ನು ವಿವರಿಸಿದೆ. ಶರೀರೇಂದ್ರಿಯಗಳ ಯೋಗ್ಯತೆ, ಉಜ್ಜ್ವಲವಾದ ಜ್ಞಾನ ಮೊದಲಾದುವು ಇಲ್ಲದಿದ್ದರೆ ಸಾಧಕನಿಗೆ ಮುಂದುವರಿಯಲು ಶಕ್ಯವಾಗು ವುದಿಲ್ಲ. ಈ ಅನುವಾಕದ ಕೊನೆಯಲ್ಲಿ ಆಚಾರ್ಯನು, 'ನೀರು ತಗ್ಗಿನ ಪ್ರದೇಶಕ್ಕೆ ಹರಿಯುವಂತೆ, ತಿಂಗಳುಗಳು ಸಂವತ್ಸರವನ್ನು ಸೇರುವಂತೆ, ಬ್ರಹ್ಮಚಾರಿಗಳು ಎಲ್ಲ ಕಡೆಯಿಂದಲೂ ಬಂದು ನನ್ನನ್ನು ಸೇರಲಿ' ಎಂದು ಪ್ರಾರ್ಥಿಸುತ್ತಾನೆ. ಐದನೆಯ ಮತ್ತು ಆರನೆಯ ಅನುವಾಕಗಳಲ್ಲಿ ವ್ಯಾಹೃತಿ

ರೂಪವಾದ ಬ್ರಹ್ಮದ ಅಂತರುಪಾಸನೆಯನ್ನು ಉಪದೇಶಿಸಿದೆ. ಭೂರ್ಭುವಃ ಮೊದಲಾದ ವ್ಯಾಹೃತಿಗಳಲ್ಲಿ ನಾಲ್ಕನೆಯ ವ್ಯಾಹೃತಿಯಾದ "ಮಹಃ" ಎಂಬುದನ್ನು ಕಂಡುಹಿಡಿದವನು ಮಾಹಾಚಮಸ್ಯ ಎಂಬ ಋಷಿ. ಮಹಃ ಎಂಬುದೇ ಬ್ರಹ್ಮ. ಬ್ರಹ್ಮೋಪಾಸನೆಗೆ ಮತ್ತು ಸಾಕ್ಷಾತ್ಕಾರಕ್ಕೆ ಹೃದಯಾಕಾಶವೇ ವಿಶಿಷ್ಟಸ್ಥಾನವೆಂದು ಹೇಳಿದೆ. ವ್ಯಾಹೃತಿರೂಪವಾದ ಆ ಬ್ರಹ್ಮವನ್ನು ಪೃಥಿವ್ಯಾದಿ ಪಾಂಕ್ತಸ್ವರೂಪದಿಂದ ಉಪಾಸಿಸಬೇಕೆಂದು ಏಳನೆಯ ಅನುವಾಕದಲ್ಲಿ ಹೇಳಿದೆ. ಎಂಟನೆಯ ಅನುವಾಕದಲ್ಲಿ ಸರ್ವೋಪಾಸನೆಗೂ ಅಂಗವಾಗಿರುವ ಪ್ರಣವದ ಉಪಾಸನೆಯನ್ನು ವಿಧಿಸಿದೆ. ಒಂಬತ್ತನೆಯ ಮತ್ತು ಹನ್ನೊಂದನೆಯ ಅನುವಾಕಗಳಲ್ಲಿ ಸಮಸ್ತ ಶ್ರೌತಸ್ಮಾರ್ತಕರ್ಮಗಳನ್ನು ನಿಯಮದಿಂದ ಮಾಡಬೇಕೆಂದು ವಿಧಿಸಿದೆ. ಹತ್ತನೆಯ ಅನುವಾಕದಲ್ಲಿ ತ್ರಿಶಂಕುಋಷಿಯು ತನ್ನ ಆರ್ಷದರ್ಶನದ ಮೂಲಕ ಆತ್ಮವಿದ್ಯಾಪ್ರಕಾಶಕವಾದ ಈ ಮಂತ್ರಾಮ್ನಾಯವನ್ನು ಕಂಡುಹಿಡಿದನೆಂದು ಹೇಳಿದೆ.

## ಬ್ರಹ್ಮಾನಂದವಲ್ಲೀ

'ಬ್ರಹ್ಮವಿದಾಪ್ನೋತಿ ಪರಮ್' (ಬ್ರಹ್ಮವಿದನು ಪರವನ್ನು ಹೊಂದುತ್ತಾನೆ) ಎಂಬ ವಾಕ್ಯವು ಈ ವಲ್ಲಿಯ ಅರ್ಥಕ್ಕೆಲ್ಲ ಸೂತ್ರವಾಗಿರುತ್ತದೆ. 'ಸತ್ಯಂ ಜ್ಞಾನಮನಂತಮ್' ಎಂಬುದು ಬ್ರಹ್ಮದ ಲಕ್ಷಣ. ಇಂತಹ ಬ್ರಹ್ಮದಿಂದ ಆಕಾಶವೇ ಮೊದಲಾಗಿ ಅನ್ನರಸಮಯನಾದ ಮನುಷ್ಯನ ವರೆಗಿನ ಜಗತ್ತೆಲ್ಲ ಸೃಷ್ಟಿಯಾಗುತ್ತದೆ. ಎರಡನೆಯ ಅನುವಾಕದಿಂದ ಐದನೆಯ ಅನುವಾಕದ ವರೆಗೆ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಎಂಬ ಐದು ಬಗೆಯ ಆತ್ಮರು ಒಬ್ಬರ ಒಳಗೆ ಒಬ್ಬರು ಇದ್ದಾರೆಂದು ವಿವರಿಸಿದೆ. ಆರನೆಯ ಅನುವಾಕದಲ್ಲಿ ಶಿಷ್ಯನ ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟಿದೆ; ಮುಖ್ಯವಾಗಿ ಬ್ರಹ್ಮದ ಅಸ್ತಿತ್ವವನ್ನು ಪ್ರತಿಪಾದಿಸಿದೆ. ಆನಂದದ ಮೀಮಾಂಸೆ ಎಂಟನೆಯ ಅನುವಾಕದ ವಿಷಯ. ಕಾಮರಹಿತನಾದ ಶ್ರೋತ್ರಿಯನಿಗೆ ವೇದ್ಯವಾದ ಆನಂದವು, ಅವಿದ್ಯಾಕಾಮಕರ್ಮಗಳು ನಶಿಸಿದಂತೆ ನೂರುಮಡಿಯಾಗಿ ಹೆಚ್ಚಿ, ಮನುಷ್ಯಗಂಧರ್ವನ ಆನಂದದಿಂದ ಪ್ರಾರಂಭಿಸಿ ಬ್ರಹ್ಮದ ಆನಂದದಲ್ಲಿ ಪರ್ಯವಸಾನವಾಗುತ್ತದೆ. ಮನೋವಾಕ್ಕುಗಳಿಗೆ ಅತೀತವಾದ ಬ್ರಹ್ಮಾನಂದವನ್ನು ಅನುಭವಿಸಿದವನು ಯಾವುದಕ್ಕೂ

ಹೆದರುವುದಿಲ್ಲ. 'ನಾನು ಒಳ್ಳೆಯದನ್ನು ಏಕೆ ಮಾಡಲಿಲ್ಲ? ನಾನು ಪಾಪವನ್ನು ಏಕೆ ಮಾಡಿದನು?' ಎಂಬ ಪಶ್ಚಾತ್ತಾಪವು ಬ್ರಹ್ಮಜ್ಞಾನಿಗೆ ಅಂತಿಮಕಾಲದಲ್ಲಿ ಬರುವುದಿಲ್ಲ; ಇದು ಒಂಬತ್ತನೆಯ ಅನುವಾಕದ ವಿಷಯ.

## ಭೃಗುವಲ್ಲೀ

ಈ ಕೊನೆಯ ವಲ್ಲಿಯಲ್ಲಿ ಬ್ರಹ್ಮವಿದ್ಯೆಗೆ ಸಾಧನವಾದ ತಪಸ್ಸನ್ನೂ ಅನ್ನಾದಿಗಳ ಉಪಾಸನೆಯನ್ನೂ ಹೇಳಿದೆ. ವರುಣನು ತನ್ನ ಮಗನಾದ ಭೃಗುವಿಗೆ ಶರೀರ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ವಾಕ್ಕು ಎಂಬ ಜ್ಞಾನ ದ್ವಾರಗಳನ್ನು ಉಪದೇಶಿಸಿ ಅನಂತರ ಎಲ್ಲ ಪ್ರಾಣಿಗಳ ಉತ್ಪತ್ತಿಸ್ಥಿತಿಲಯಗಳಿಗೆ ಯಾವ ವಸ್ತುವು ಕಾರಣವೋ ಅದೇ ಬ್ರಹ್ಮವೆಂದು ಬ್ರಹ್ಮದ ಸಾಮಾನ್ಯ ಲಕ್ಷಣವನ್ನು ಉಪದೇಶಿಸುತ್ತಾನೆ. ಭೃಗುವು ಅನ್ನವನ್ನೇ ಬ್ರಹ್ಮವೆಂದು ಮೊದಲು ತಿಳಿದುಕೊಂಡನು. ಆದರೆ ಈ ಲಕ್ಷಣದಿಂದ ತೃಪ್ತನಾಗದೆ ಪುನಃ ಪುನಃ ತಪಸ್ಸುಮಾಡಿ, ಅನ್ನ ಪ್ರಾಣ ಮನಸ್ಸು ವಿಜ್ಞಾನ ಇವುಗಳನ್ನು ಬ್ರಹ್ಮ ವೆಂದು ತಿಳಿದುಕೊಂಡು, ಕೊನೆಗೆ ಎಲ್ಲಕ್ಕೂ ಅಂತರತಮವಾದ ಆನಂದವೇ ಬ್ರಹ್ಮವೆಂದು ನಿರ್ಧರಿಸಿದನು. ಇದು ಮೊದಲನೆಯ ಆರು ಅನುವಾಕಗಳ ಸಾರಾಂಶ. ಒಂದು ದೃಷ್ಟಿಯಿಂದ ಪ್ರಾಣವು ಅನ್ನ, ಶರೀರವು ಅನ್ನಾದ; ಆದರೆ ಇನ್ನೊಂದು ದೃಷ್ಟಿಯಿಂದ ಶರೀರವೇ ಅನ್ನ, ಪ್ರಾಣವೇ ಅನ್ನಾದ. ಅನ್ನೋಪಾಸಕನು ಅನ್ನವನ್ನು ನಿಂದಿಸಬಾರದು. ಹೀಗೆಯೇ ನೀರು–ಜ್ಯೋತಿಸ್ಸು, ಪೃಥಿವೀ–ಆಕಾಶ ಇವು ಪರಸ್ಪರವಾಗಿ ಅನ್ನ-ಅನ್ನಾದಗಳು ಎಂದು ಉಪಾಸಿಸಬೇಕು; ಇದು ಎಂಟನೆಯ ಮತ್ತು ಒಂಬತ್ತನೆಯ ಅನು ವಾಕಗಳ ವಿಷಯ. ಹತ್ತನೆಯ ಅನುವಾಕವು ಅನ್ನದಾನದ ಮಾಹಾತ್ಮ್ಯ ದಿಂದ ಪ್ರಾರಂಭವಾಗುತ್ತದೆ. ವಸತಿಯನ್ನು ಯಾರಿಗೂ ನಿರಾಕರಿಸಕೂಡದು. ಯಾರು ಹೀಗೆ ಅನ್ನದಾನ ಮಾಡುವರೊ ಅವರಿಗೆ ಫಲವು ಸಿದ್ಧಿಸುವುದು. ಒಂದೇ ಬ್ರಹ್ಮವಸ್ತುವು ಪುರುಷನಲ್ಲಿಯೂ ಆದಿತ್ಯನಲ್ಲಿಯೂ ಅಂತರ್ಯಾಮಿ ಯಾಗಿ ಇರುವುದು. ಯಾರು ಹೀಗೆ ಅರಿತುಕೊಳ್ಳುವರೊ ಅವರು ಅನ್ನಮಯದಿಂದ ಹಿಡಿದು ಆನಂದಮಯದ ವರೆಗೆ ಇರುವ ಎಲ್ಲ ಆತ್ಮರನ್ನು ಹೊಂದಿ ಬ್ರಹ್ಮಾನಂದದಲ್ಲಿ ಮುಳುಗಿ ಮುಕ್ತಿಯನ್ನು ಹೊಂದು ತ್ತಾರೆ.

## ಆನಂದಮಯನು ಯಾರು?

ಈ ಮೂರು ವಲ್ಲಿಗಳಲ್ಲಿ ಆನಂದವಲ್ಲಿಯು ಅತ್ಯಂತ ಮುಖ್ಯವಾದು ದೆಂಬುದು ನಿರ್ವಿವಾದವಾಗಿದೆ. ಆನಂದಮಯನ ವಿಷಯವು ವೇದಾಂತ ಸೂತ್ರಗಳ ಆನಂದಮಯಾಧಿಕರಣದಲ್ಲಿ (೧, ೧೨–೧೯) ಕೂಲಂಕಷವಾಗಿ ಚರ್ಚಿಸಲ್ಪಟ್ಟಿದೆ. 'ವಿಜ್ಞಾನಮಯನಾದ ಆತ್ಮನಿಗಿಂತಲೂ ಬೇರೆಯವನಾದ, ಒಳಗಿರುವ ಮತ್ತು ಆನಂದಮಯನಾದ ಆತ್ಮನಿರುವನು' (೨, ೫) ಎಂಬಲ್ಲಿ ಹೇಳಿರುವ ಆನಂದಮಯನು ಪರಬ್ರಹ್ಮವೊ ಅಥವಾ ಅನ್ನಮಯಾದಿಗಳಂತೆ ಭಿನ್ನವಸ್ತುವೊ ಎಂಬುದು ಪ್ರಶ್ನೆ. ಶಾಂಕರಭಾಷ್ಯದ ಪ್ರಕಾರ ಆನಂದ ಮಯಾತ್ಮನು ಬ್ರಹ್ಮವಲ್ಲ; ಆನಂದಮಯನನ್ನು ಕಾರ್ಯಾತ್ಮನೆಂದೇ ಅರಿಯ ಬೇಕು. 'ಮಯಟ್' ಪ್ರತ್ಯಯವನ್ನು 'ಅನ್ನಮಯ' ಎಂಬಂತೆ ವಿಕಾರಾರ್ಥ ದಲ್ಲಿ ಪ್ರಯೋಗಿಸಿದೆ. ಮುಂದೆ 'ಆನಂದಮಯಾತ್ಮನನ್ನು ಉಪಸಂಕ್ರಮಿಸು ತ್ತಾನೆ' ಎಂದು ಹೇಳಿರುವುದರಿಂದ ಆನಂದಮಯನು ಕಾರ್ಯವರ್ಗಕ್ಕೆ ಸೇರಿದವನೆಂದೂ ಊಹಿಸಬಹುದು. 'ಆನಂದ' ಎಂದರೆ ಉಪಾಸನೆ ಮತ್ತು ಕರ್ಮ ಇವುಗಳ ಫಲ; ಅದರ ವಿಕಾರ ಆನಂದಮಯನು. ಇದಲ್ಲದೆ ಆನಂದಮಯನಿಗೆ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಹೇಳಿರುವುದ ರಿಂದ ಆನಂದಮಯನು ನಿರುಪಾಧಿಕಬ್ರಹ್ಮವೆಂದು ನಿರ್ಧರಿಸಲಾಗುವುದಿಲ್ಲ. ಸತ್ಯಜ್ಞಾನಾನಂತರೂಪವಾದ ಮತ್ತು 'ಬ್ರಹ್ಮವಿದಾಪ್ನೋತಿ ಪರಮ್' ಎಂಬಲ್ಲಿ ಹೇಳಿರುವ ಬ್ರಹ್ಮವೇ ಆನಂದಮಯನ ಪುಚ್ಛ ಅಥವಾ ಆಧಾರ; ಪುಚ್ಛವೆಂದರೆ ಇಲ್ಲಿ ಅವಯವವಲ್ಲ; ಬ್ರಹ್ಮವೇ ಸ್ವಪ್ರಧಾನವಾಗಿ ಉಪದೇಶಿಸಲ್ಪಟ್ಟಿದೆ.

ರಾಮಾನುಜೀಯವ್ಯಾಖ್ಯಾನದ ಪ್ರಕಾರ ಆನಂದಮಯನು ಪರ ಬ್ರಹ್ಮನೇ, ಕಾರ್ಯವರ್ಗಕ್ಕೆ ಸೇರಿದವನಲ್ಲ. ಹಿಂದಿನ ನಾಲ್ಕು ಅನ್ನಮಯ, ಪ್ರಾಣಮಯ, ಮನೋಮಯ ಮತ್ತು ವಿಜ್ಞಾನಮಯ ಇವುಗಳ ವಿಷಯದಲ್ಲಿ ಉಪನಿಷತ್ತು ವ್ಯಾಪಕವಾದ ಬೇರೊಂದು ಆತ್ಮನಿರುವುದನ್ನು ಹೇಳಿ ಉಪದೇಶ ವನ್ನು ಮುಂದುವರಿಸಿದೆ. ಆದರೆ ಬೇರೊಂದು ಯಾವ ಆತ್ಮನನ್ನೂ ಆನಂದ ಮಯನಿಂದ ಮುಂದೆ ಹೇಳಿಲ್ಲ. 'ಏತಸ್ಮಾತ್ ಆನಂದಮಯಾದನ್ಯೋಽಂತರ ಆತ್ಮಾ' ಎಂದು ಹೇಳಿಲ್ಲ. ಇದು ಸ್ಫುಟವಾಗಿ ಪ್ರತೀತವಾಗುವ ಅರ್ಥ. ಆದರೆ ಇಲ್ಲಿ ಕೆಲವು ಆಕ್ಷೇಪಣೆಗಳಿಗೆ ಅವಕಾಶವಿದೆ. ಅವುಗಳಿಗೆ ಹೀಗೆ ಉತ್ತರ ಹೇಳಲ್ಪಟ್ಟಿದೆ:

(೧) 'ಮಯಟ್' ಪ್ರತ್ಯಯ ವಿಕಾರವನ್ನು ಸೂಚಿಸುತ್ತದೆ. ಬ್ರಹ್ಮನು ನಿರ್ವಿಕಾರಿ. ಆ ಪ್ರತ್ಯಯುವನ್ನು ಇಲ್ಲಿ ಪ್ರಾಚುರ್ಯಾರ್ಥದಲ್ಲಿ ತೆಗೆದುಕೊಳ್ಳ ಬೇಕು. ಹಿಂದಿನ ನಾಲ್ಕು ಸ್ಥಾನಗಳಲ್ಲಿ ಮಯಟ್-ಅನ್ನು ವಿಕಾರಾರ್ಥವಾಗಿ ತೆಗೆದುಕೊಂಡು ಇಲ್ಲಿ ಬೇರೆ ಅರ್ಥ ಹೇಳುವುದು ಸರಿಯೆ ಎಂದು ಪ್ರಶ್ನೆ. ಪ್ರಾಣಮಯದಲ್ಲಿಯೇ ವಿಕಾರಾರ್ಥವನ್ನು ತ್ಯಾಗಮಾಡಿದೆ. ಅಲ್ಲಿ ಪ್ರತ್ಯಯ ಸ್ವಾರ್ಥಿಕ. ಆನಂದದ ಪ್ರಾಚುರ್ಯವೆಂದರೆ ಅಧಿಕವಾಗಿ ಆನಂದವೂ ಸ್ವಲ್ಪ ದುಃಖವೂ ಇದೆ ಎಂದು ಅರ್ಥವಲ್ಲ. ಆನಂದವು ಪ್ರಭೂತವಾಗಿದೆ ಎಂದು ಭಾವ. ಅದರ ಅಲ್ಪತ್ವವ್ಯಾವೃತ್ತಿ ಮುಖ್ಯಾರ್ಥ.

(೨) ಇಲ್ಲಿ ಆನಂದಮಯುನಿಗೆ ಶಿರಸ್ಸು ಪಕ್ಷ ವೊದಲಾದುವುಗಳನ್ನು ಹೇಳಿದೆ. ಆದರೆ ಬ್ರಹ್ಮನು ನಿರವಯುವ. ಇಲ್ಲಿ ಸಮನ್ವಯ ಹೇಗೆ? ಶಿರಸ್ಸು, ಪಕ್ಷ ಮತ್ತು ಪುಚ್ಛ ಇವು ಕೇವಲ ರೂಪಣ. ಅವು ಪರಸ್ಪರ ಭಿನ್ನವಾದ ಖಂಡಗಳೆಂದು ಅರ್ಥಮಾಡಲು ಅಗತ್ಯವಿಲ್ಲ.

(೩) ಆನಂದಮಯುನ ಪುಚ್ಛವು ಬ್ರಹ್ಮನೆಂದು ಹೇಳಿದೆ. ಆನಂದ ಮಯನೂ ಬ್ರಹ್ಮ, ಅವನ ಪುಚ್ಛವೂ ಬ್ರಹ್ಮ ಎನ್ನುವುದು ಹೇಗೆ? ಇಲ್ಲಿಯೂ ಕೂಡ ಅವಯುವ-ಅವಯುವಿ ಕಲ್ಪನೆ ಕೇವಲ ರೂಪಣ. ಅಂಶಾಂಶಿಭಾವ ಅಭಿಪ್ರೇತವಲ್ಲ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಹೇಳಲ್ಪಟ್ಟ ಬ್ರಹ್ಮವಸ್ತುವು ಅನಂತಾನಂದಸ್ವರೂಪ ಎಂದು ಹೇಳುವುದು ಶ್ರುತಿಯ ಉದ್ದೇಶ. ಬ್ರಹ್ಮನ ಮತ್ತು ಆನಂದಸ್ವರೂಪದ ಅನನ್ಯತೆಯನ್ನು ಪುಚ್ಛ ಮತ್ತು ಅವಯುವಿರೂಪಣ ಮೂಲಕ ತಿಳಿಸಿದೆ.

(೪) 'ಅಸನ್ನೇವ ಸ ಭವತಿ. . . . ' ಈ ವಾಕ್ಯ ಆನಂದಮಯ ನನ್ನು ಬಿಟ್ಟು ಬ್ರಹ್ಮನಿಗೆ ಮಾತ್ರ ಅನ್ವಯಿಸಿದೆ. ಬ್ರಹ್ಮನೇ ಆನಂದಮಯ ನಾಗಿದ್ದರೆ ಹಾಗಾಗುತ್ತಿರಲಿಲ್ಲ. ಆದರೆ ಹಿಂದೆ ಉದಾಹೃತವಾದ ಯಾವ ವಾಕ್ಯವೂ ಆಯಾ ಪುಚ್ಛಗಳಿಗೆ ಅನ್ವಿತವಾಗಿಲ್ಲ; ಆ ಪುಚ್ಛಗಳನ್ನುಳ್ಳ ಆತ್ಮರಿಗೆ ಅನ್ವಿತವಾಗಿದೆ. ಹಾಗೆಯೇ ಇಲ್ಲಿಯೂ ವ್ಯವಸ್ಥೆ.

(೫) ಭೃಗುವಲ್ಲಿಯುಲ್ಲಿ 'ಆನಂದವು ಬ್ರಹ್ಮ' ಎಂದು ನಿರ್ಧಾರವಾದ ಮೇಲೆ, ಜ್ಞಾನಿಯು ಆನಂದಮಯಾತ್ಮನನ್ನು ಉಪಸಂಕ್ರಮಿಸುವನೆಂದು ಹೇಳುವುದನ್ನು ನೋಡಿದರೆ 'ಆನಂದಮಯುನು' ಎಂದರೂ 'ಆನಂದ ಸ್ವರೂಪಿ ಬ್ರಹ್ಮ' ಎಂದರೂ ಒಂದೇ ಅರ್ಥ ಎನ್ನುವುದರಲ್ಲಿ ಸಂಶಯುವಿಲ್ಲ.

ಉಪಸಂಕ್ರಮಣವೆಂದರೆ ಪ್ರಾಪ್ತಿ ಎಂದರ್ಥ. ಇಲ್ಲಿ ಉಪಸಂಕ್ರಮಣವು ಪ್ರಾಪ್ತ್ಯರ್ಥದಲ್ಲಿ ಹೇಳಿರುವುದರಿಂದ ಆನಂದಮಯಾತ್ಮನು ಪರಬ್ರಹ್ಮನೇ.

ತೈತ್ತಿರೀಯೋಪನಿಷತ್ತಿನ ಸ್ವರಪಾಠದಲ್ಲಿ ಅನೇಕ ಪ್ರಭೇದಗಳಿವೆ. ಮದ್ರಾಸು ರಾಮಕೃಷ್ಣ ಮಠದವರು ಪ್ರಕಾಶಿಸಿರುವ ತೈತ್ತಿರೀಯೋಪನಿಷತ್ತಿನ ಸ್ವರಪಾಠವನ್ನು ನಾವು ಅನುಸರಿಸಿರುತ್ತೇವೆ.

ಗ್ರಂಥದ ಮೊದಲನೆಯ ಭಾಗವು ಶಾಂಕರಭಾಷ್ಯವನ್ನು ಅನುಸರಿಸಿದೆ. ಎರಡನೆಯ ಭಾಗದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಶ್ರೀ ಎಸ್. ಎಸ್. ರಾಘವಾಚಾರ್ಯ ಎಂ. ಎ. ಅವರು ಶ್ರೀರಂಗರಾಮಾನುಜರ ಭಾಷ್ಯವನ್ನವಲಂಬಿಸಿ ಉಪನಿಷತ್ತಿನ ಅನುವಾದವನ್ನು ಮಾಡಿರುತ್ತಾರೆ. ಅವರಿಗೆ ನಾವು ಕೃತಜ್ಞರಾಗಿರುತ್ತೇವೆ.

ಶ್ರೀರಾಮಕೃಷ್ಣಾಶ್ರಮ
ಮಂಗಳೂರು
೧೨—೨—೧೯೫೮

ಸ್ವಾಮಿ ಆದಿದೇವಾನಂದ

# ತೈತ್ತಿರೀಯೋಪನಿಷತ್

## ಶೀಕ್ಷಾವಲ್ಲೀ

### ಮೊದಲನೆಯ ಅನುವಾಕ

ಹರಿಃ ಓಮ್ ॥ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ। ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ ಇತಿ ಪ್ರಥಮೋಽನುವಾಕಃ ॥

ಮಿತ್ರಃ = ಮಿತ್ರನು ನಃ = ನಮಗೆ ಶಂ [ಭವತು] = ಸುಖವನ್ನು ಉಂಟುಮಾಡಲಿ; ವರುಣಃ = ವರುಣನು ಶಂ [ಭವತು] = ಸುಖವನ್ನು ಉಂಟುಮಾಡಲಿ. ಅರ್ಯಮಾ = ಅರ್ಯಮನು ನಃ ಶಂ ಭವತು = ನಮಗೆ ಸುಖವನ್ನು ಉಂಟುಮಾಡಲಿ. ಇಂದ್ರಃ = ಇಂದ್ರನು ನಃ ಶಂ [ಭವತು] = ನಮಗೆ ಸುಖವನ್ನು ಉಂಟುಮಾಡಲಿ, ಬೃಹಸ್ಪತಿಃ = ಬೃಹಸ್ಪತಿಯು [ನಃ ಶಂ ಭವತು = ನಮಗೆ ಸುಖವನ್ನು ಉಂಟುಮಾಡಲಿ]. ಉರುಕ್ರಮಃ = ಉರುಕ್ರಮನಾದ ವಿಷ್ಣುಃ = ವಿಷ್ಣುವು ನಃ ಶಂ [ಭವತು] = ನಮಗೆ ಸುಖವನ್ನು ಉಂಟುಮಾಡಲಿ. ಬ್ರಹ್ಮಣೇ = [ಪರೋಕ್ಷರೂಪನಾದ] ವಾಯುವಿಗೆ ನಮಃ = ನಮಸ್ಕಾರ. ವಾಯೋ = ಹೇ ವಾಯುವೆ, ತೇ = [ಪ್ರತ್ಯಕ್ಷನಾದ] ನಿನಗೆ ನಮಃ = ನಮಸ್ಕಾರ. ತ್ವಂ ಏವ = ನೀನೇ ಪ್ರತ್ಯಕ್ಷಂ ಬ್ರಹ್ಮ ಅಸಿ = ಪ್ರತ್ಯಕ್ಷ ಬ್ರಹ್ಮವಾಗಿರುತ್ತೀಯೆ. ತ್ವಾಂ ಏವ = ನಿನ್ನನ್ನೇ ಪ್ರತ್ಯಕ್ಷಂ ಬ್ರಹ್ಮ = ಪ್ರತ್ಯಕ್ಷ ಬ್ರಹ್ಮವೆಂದು ವದಿಷ್ಯಾಮಿ = ಹೇಳುತ್ತೇನೆ; ಋತಂ ವದಿಷ್ಯಾಮಿ = ಋತವೆಂದು ಹೇಳುತ್ತೇನೆ; ಸತ್ಯಂ ವದಿಷ್ಯಾಮಿ = ಸತ್ಯವೆಂದು ಹೇಳುತ್ತೇನೆ. ತತ್ =

**ಅದು ಮಾಂ = ನನ್ನನ್ನು ಅವತು = ಕಾಪಾಡಲಿ. ತತ್ = ಅದು ವಕ್ತಾರಂ = ಹೇಳುವವನನ್ನು ಎಂದರೆ ಆಚಾರ್ಯನನ್ನು ಅವತು = ಕಾಪಾಡಲಿ. ಮಾಂ ಅವತು = ನನ್ನನ್ನು ಕಾಪಾಡಲಿ. ವಕ್ತಾರಂ ಅವತು = ಆಚಾರ್ಯನನ್ನು ಕಾಪಾಡಲಿ. ಓಂ ಶಾಂತಿಃ ಶಾಂತಿಃ ಶಾಂತಿಃ.**

## ಹರಿಃ ಓಮ್

**೧.** ಮಿತ್ರನು[೧] ನಮಗೆ ಸುಖವನ್ನುಂಟುಮಾಡಲಿ. ವರುಣನು[೨] ನಮಗೆ ಸುಖವನ್ನುಂಟುಮಾಡಲಿ. ಅರ್ಯಮನು[೩] ನಮಗೆ ಸುಖವನ್ನುಂಟುಮಾಡಲಿ. ಇಂದ್ರನೂ[೪] ಬೃಹಸ್ಪತಿಯೂ[೫] ನಮಗೆ ಸುಖವನ್ನುಂಟುಮಾಡಲಿ. ಉರುಕ್ರಮನಾದ ವಿಷ್ಣುವು[೬] ನಮಗೆ ಸುಖವನ್ನುಂಟುಮಾಡಲಿ[೭].

(ಪರೋಕ್ಷರೂಪನಾದ) ವಾಯುವಿಗೆ[೮] ನಮಸ್ಕಾರ! ಹೇ ವಾಯುವೆ, (ಪ್ರತ್ಯಕ್ಷನಾದ) ನಿನಗೆ ನಮಸ್ಕಾರ! ನೀನೇ ಪ್ರತ್ಯಕ್ಷ ಬ್ರಹ್ಮವಾಗಿರುತ್ತೀಯೆ. ನಿನ್ನನ್ನೇ ಪ್ರತ್ಯಕ್ಷ ಬ್ರಹ್ಮವೆಂದು ಹೇಳುತ್ತೇನೆ.[೯] (ನಿನ್ನನ್ನೇ) ಋತವೆಂದು[೧೦] ಹೇಳುತ್ತೇನೆ. (ನಿನ್ನನ್ನೇ) ಸತ್ಯವೆಂದು[೧೧] ಹೇಳುತ್ತೇನೆ.

ಅದು[೧೨] ನನ್ನನ್ನು ಕಾಪಾಡಲಿ! ಅದು ಆಚಾರ್ಯನನ್ನು ಕಾಪಾಡಲಿ! ನನ್ನನ್ನು ಕಾಪಾಡಲಿ, ಆಚಾರ್ಯನನ್ನು ಕಾಪಾಡಲಿ! ಓಂ ಶಾಂತಿಃ ಶಾಂತಿಃ ಶಾಂತಿಃ![೧೩]

[ಈ ಶಾಂತಿಪಾಠವು ಋಗ್ವೇದಸಂಹಿತೆಯು ೧, ೯೦, ೯ರಲ್ಲಿ ಬರುತ್ತದೆ.

[೧] ಮಿತ್ರನು ಪ್ರಾಣವೃತ್ತಿಗೂ ಹಗಲಿಗೂ ಅಭಿಮಾನಿದೇವತೆ.

[೨] ವರುಣನು ಅಪಾನವೃತ್ತಿಗೂ ರಾತ್ರಿಗೂ ಅಭಿಮಾನಿದೇವತೆ.

[೩] ಅರ್ಯಮನು ಕಣ್ಣಿಗೂ ಸೂರ್ಯನಿಗೂ ಅಭಿಮಾನಿದೇವತೆ.

[೪] ಇಂದ್ರನು ಬಲಕ್ಕೆ ಅಭಿಮಾನಿದೇವತೆ.

[೫] ಬೃಹಸ್ಪತಿಯು ವಾಕ್ಕಿಗೂ ಬುದ್ಧಿಗೂ ಅಭಿಮಾನಿದೇವತೆ.

[೬] ವಿಸ್ತೀರ್ಣವಾದ ಕ್ರಮವುಳ್ಳವನು ಉರುಕ್ರಮ, ಸರ್ವವ್ಯಾಪಕನು ಎಂದರ್ಥ. ತ್ರಿವಿಕ್ರಮಾವತಾರದಲ್ಲಿ ವಿಷ್ಣುವು ದೊಡ್ಡ ಹೆಜ್ಜೆಗಳನ್ನು ಹಾಕಿ ಎಲ್ಲವನ್ನೂ ಆಕ್ರಮಿಸಿಕೊಂಡಿದ್ದರಿಂದ ಅವನಿಗೆ ಉರುಕ್ರಮನೆಂದು ಹೆಸರು. ವಿಷ್ಣುವು ಪಾದಗಳಿಗೆ ಅಭಿಮಾನಿದೇವತೆ. ಮಿತ್ರನಿಂದ ವಿಷ್ಣುವಿನ ವರೆಗೆ ಇವರೆಲ್ಲರನ್ನೂ ಅಧ್ಯಾತ್ಮ ದೇವತೆಗಳೆಂದು ಭಾವಿಸಿದೆ.

[೭] ಇವರು ಸುಖವನ್ನುಂಟುಮಾಡಿದರೆ ವಿದ್ಯೆಯ ಶ್ರವಣ, ಧಾರಣೆ ಮೊದಲಾದುವು ಪ್ರತಿಬಂಧವಿಲ್ಲದೆ ಆಗುವುವು.

೮ ಇಲ್ಲಿ ಬ್ರಹ್ಮವೆಂದರೆ ಸೂತ್ರಾತ್ಮ ಅಥವಾ ವಾಯು. ಸರ್ವಕರ್ಮಗಳ ಫಲವು ಇವನ ಅಧೀನವಾಗಿದೆ.

೯ ವಾಯುವೇ ನಮ್ಮ ಶರೀರದಲ್ಲಿ ಪ್ರಾಣನಾಗಿರುತ್ತಾನೆ. ಇಂದ್ರಿಯಗಳಿಗೆ ಹೋಲಿಸಿದರೆ ಪ್ರಾಣನು ಅತ್ಯಂತ ಸನ್ನಿಕೃಷ್ಟನಾಗಿರುವುದರಿಂದ ಅವನನ್ನು ಪ್ರತ್ಯಕ್ಷ ಬ್ರಹ್ಮವೆಂದು ಕರೆದಿದೆ.

೧೦ ಶಾಸ್ತ್ರದ ಆದೇಶದಂತೆ ಬುದ್ಧಿಯಲ್ಲಿ ನಿಶ್ಚಿತವಾದ ಅರ್ಥಕ್ಕೆ ಋತವೆಂದು ಹೆಸರು. ಅದು ಪ್ರಾಣನ ಅಧೀನವಾಗಿರುವುದರಿಂದ ಪ್ರಾಣನನ್ನೇ ಋತವೆಂದು ಕರೆದಿದೆ.

೧೧ ವಾಕ್ಕಾಯಗಳಿಂದ ಮಾಡತಕ್ಕದ್ದು ಸತ್ಯ. ಇದೂ ಕೂಡ ಪ್ರಾಣನ ಅನುಗ್ರಹ ದಿಂದಲೇ ಆಗಬೇಕು.

೧೨ ಸರ್ವಾತ್ಮನಾದ ವಾಯುವೆಂಬ ಬ್ರಹ್ಮ.

೧೩ ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ಎಂಬ ಮೂರು ಬಗೆಯ ವಿಘ್ನಗಳು ನಾಶವಾಗಲೆಂದು ಮೂರು ಸಲ ಶಾಂತಿಶಬ್ದವನ್ನು ಹೇಳಿದೆ.]

# ಎರಡನೆಯ ಅನುವಾಕ

**ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಮ್ । ಸಾಮ ಸಂತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ॥ ಇತಿ ದ್ವಿತೀಯೋಽನುವಾಕಃ ॥**

ಓಂ. ಶೀಕ್ಷಾಂ [ಶಿಕ್ಷಾಂ]=ಶಿಕ್ಷೆಯನ್ನು **ವ್ಯಾಖ್ಯಾಸ್ಯಾಮಃ**=ವ್ಯಾಖ್ಯಾನಮಾಡುತ್ತೇವೆ: **ವರ್ಣಃ** = ವರ್ಣ, **ಸ್ವರಃ** = ಸ್ವರ, **ಮಾತ್ರಾ** = ಮಾತ್ರೆ, **ಬಲಂ** = ಬಲ, **ಸಾಮ** = ಸಾಮ, **ಸಂತಾನಃ** = ಸಂತಾನ; **ಇತಿ** = ಹೀಗೆ, **ಶೀಕ್ಷಾಧ್ಯಾಯಃ** = ಶಿಕ್ಷಾವಿಷಯಕವಾದ ಅಧ್ಯಾಯವು **ಉಕ್ತಃ** = ಹೇಳಲ್ಪಟ್ಟಿದೆ.

ಓಂ. ಶಿಕ್ಷೆಯನ್ನು[೧] ವ್ಯಾಖ್ಯಾನಮಾಡುತ್ತೇವೆ: ವರ್ಣ,[೨] ಸ್ವರ,[೩] ಮಾತ್ರೆ,[೪] ಬಲ,[೫] ಸಾಮ,[೬] ಸಂತಾನ;[೭] ಹೀಗೆ ಶಿಕ್ಷಾವಿಷಯಕವಾದ ಅಧ್ಯಾಯವು ಹೇಳಲ್ಪಟ್ಟಿದೆ.

[ಉಪನಿಷತ್ತಿನ ವಾಕ್ಯಗಳಿಗೆ ಅರ್ಥಜ್ಞಾನವು ಪ್ರಧಾನವಾಗಿರುವುದರಿಂದ ಗ್ರಂಥಪಾಠ ಮಾಡುವುದರಲ್ಲಿ ಯತ್ನವನ್ನು ಬಿಡಕೂಡದು; ಅದಕ್ಕಾಗಿ ಶಿಕ್ಷಾಧ್ಯಾಯವು ಆರಂಭಿಸಲ್ಪಟ್ಟಿದೆ.

೧ ವರ್ಣಾದಿಗಳ ಉಚ್ಚಾರವನ್ನು ನಿರೂಪಿಸುವ ಶಾಸ್ತ್ರಕ್ಕೆ ಶಿಕ್ಷಾ ಎಂದು ಹೆಸರು.

೨ ಅಕಾರಾದಿಗಳು.

೩ ಉದಾತ್ತವೇ ಮೊದಲಾದುವು.

೪ ಹ್ರಸ್ವವೇ ಮೊದಲಾದುವು.

೫ ಉಚ್ಚಾರಣಾಪ್ರಯತ್ನ.

೬ ಮಧ್ಯಮ ಧ್ವನಿಯಿಂದ ಉಚ್ಚರಿಸುವುದು.

೭ ಶಬ್ದಗಳ ಸಂತತಿ ಅಥವಾ ಸಂಹಿತೆ.]

## ಮೂರನೆಯ ಅನುವಾಕ

ಸಹ ನೌ ಯಶಃ । ಸಹ ನೌ ಬ್ರಹ್ಮವರ್ಚಸಮ್ । ಅಥಾತಃ ಸಗ್ಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿಕರಣೇಷು । ಅಧಿಲೋಕಮಧಿಜ್ಯೌತಿಷಮಧಿವಿದ್ಯಮಧಿಪ್ರಜಮಧ್ಯಾತ್ಮಮ್ । ತಾ ಮಹಾಸಗ್ಂಹಿತಾ ಇತ್ಯಾಚಕ್ಷತೇ । ಅಥಾಧಿಲೋಕಮ್ । ಪೃಥಿವೀ ಪೂರ್ವರೂಪಮ್ । ದ್ಯೌರುತ್ತರರೂಪಮ್ । ಆಕಾಶಃ ಸಂಧಿಃ । ವಾಯುಃ ಸಂಧಾನಮ್ । ಇತ್ಯಧಿಲೋಕಮ್ । ಅಥಾಧಿಜ್ಯೌತಿಷಮ್ । ಅಗ್ನಿಃ ಪೂರ್ವರೂಪಮ್ । ಆದಿತ್ಯ ಉತ್ತರರೂಪಮ್ । ಆಪಃ ಸಂಧಿಃ । ವೈದ್ಯುತಃ ಸಂಧಾನಮ್ । ಇತ್ಯಧಿಜ್ಯೌತಿಷಮ್ । ಅಥಾಧಿವಿದ್ಯಮ್ । ಆಚಾರ್ಯಃ ಪೂರ್ವರೂಪಮ್ । ಅಂತೇವಾಸ್ಯುತ್ತರರೂಪಮ್ । ವಿದ್ಯಾ ಸಂಧಿಃ । ಪ್ರವಚನಗ್ಂ ಸಂಧಾನಮ್ । ಇತ್ಯಧಿವಿದ್ಯಮ್ । ಅಥಾಧಿಪ್ರಜಮ್ । ಮಾತಾ ಪೂರ್ವರೂಪಮ್ । ಪಿತೋತ್ತರರೂಪಮ್ । ಪ್ರಜಾ ಸಂಧಿಃ । ಪ್ರಜನನಗ್ಂ ಸಂಧಾನಮ್ । ಇತ್ಯಧಿಪ್ರಜಮ್ । ಅಥಾಧ್ಯಾತ್ಮಮ್ । ಅಧರಾ ಹನುಃ ಪೂರ್ವರೂಪಮ್ । ಉತ್ತರಾ ಹನುರುತ್ತರರೂಪಮ್ । ವಾಕ್ ಸಂಧಿಃ । ಜಿಹ್ವಾ ಸಂಧಾನಮ್ । ಇತ್ಯಧ್ಯಾತ್ಮಮ್ । ಇತೀಮಾ ಮಹಾಸಗ್ಂಹಿತಾಃ । ಯ ಏವಮೇತಾ ಮಹಾಸಗ್ಂಹಿತಾ ವ್ಯಾಖ್ಯಾತಾ ವೇದ । ಸಂಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗ್ಯೇಣ ಲೋಕೇನ ॥

ಇತಿ ತೃತೀಯೋಽನುವಾಕಃ ।

**ನೌ** = ನಮ್ಮಿಬ್ಬರಿಗೆ **ಯಶಃ** = ಯಶಸ್ಸು **ಸಹ** = ಜೊತೆಯಲ್ಲಿ [**ಅಸ್ತು** = ಉಂಟಾಗಲಿ]. **ನೌ** = ನಮ್ಮಿಬ್ಬರಿಗೆ **ಬ್ರಹ್ಮವರ್ಚಸಂ** = ಬ್ರಹ್ಮವರ್ಚಸ್ಸು **ಸಹ** = ಜೊತೆಯಲ್ಲಿ [**ಅಸ್ತು** = ಉಂಟಾಗಲಿ].

ನಮ್ಮಿಬ್ಬರಿಗೆ ಜೊತೆಯಲ್ಲಿ ಯಶಸ್ಸುಂಟಾಗಲಿ.[೧] ನಮ್ಮಿಬ್ಬರಿಗೆ ಜೊತೆಯಲ್ಲಿ ಬ್ರಹ್ಮವರ್ಚಸ್ಸುಂಟಾಗಲಿ.[೨]

[ಇದು ಶಿಷ್ಯನ ಪ್ರಾರ್ಥನೆ.
[೧] ಸಂಹಿತೆಯೇ ಮೊದಲಾದ ಉಪನಿಷತ್ ಜ್ಞಾನದಿಂದ ಉಂಟಾಗುವ ಯಶಸ್ಸು.
[೨] ವೇದಾಧ್ಯಯನದಿಂದ ಉಂಟಾಗುವ ತೇಜಸ್ಸು.]

**ಅಥ** = ಈಗ **ಅತಃ** = ಆದುದರಿಂದ **ಪಂಚಸು** = ಐದು **ಅಧಿಕರಣೇಷು** = ಆಶ್ರಯಗಳಲ್ಲಿ **ಸಂಹಿತಾಯಾಃ** = ಸಂಹಿತೆಯ **ಉಪನಿಷದಂ** = ಉಪನಿಷತ್ತನ್ನು **ವ್ಯಾಖ್ಯಾಸ್ಯಾಮಃ** = ವ್ಯಾಖ್ಯಾನಮಾಡುತ್ತೇವೆ — **ಅಧಿಲೋಕಂ** = ಅಧಿಲೋಕ, **ಅಧಿಜ್ಯೌತಿಷಂ** = ಅಧಿಜ್ಯೌತಿಷ, **ಅಧಿವಿದ್ಯಂ** = ಅಧಿವಿದ್ಯ, **ಅಧಿಪ್ರಜಂ** = ಅಧಿಪ್ರಜ, **ಅಧ್ಯಾತ್ಮಂ** = ಅಧ್ಯಾತ್ಮ. **ತಾಃ** = ಅವು **ಮಹಾಸಂಹಿತಾಃ** = ಮಹಾಸಂಹಿತೆಗಳು **ಇತಿ** = ಎಂದು **ಆಚಕ್ಷತೇ** = ಹೇಳುತ್ತಾರೆ.

ಈಗ[೧] ಆದುದರಿಂದ[೨] ಐದು ಆಶ್ರಯಗಳಲ್ಲಿ[೩] ಸಂಹಿತೆಯ ಉಪನಿಷತ್ತನ್ನು[೪] ವ್ಯಾಖ್ಯಾನಮಾಡುತ್ತೇವೆ: ಅಧಿಲೋಕ,[೫] ಅಧಿಜ್ಯೌತಿಷ,[೬] ಅಧಿವಿದ್ಯ,[೭] ಅಧಿಪ್ರಜ,[೮] ಅಧ್ಯಾತ್ಮ.[೯] ಅವುಗಳನ್ನು[೧೦] ಮಹಾಸಂಹಿತೆಗಳೆಂದು[೧೧] ಹೇಳುತ್ತಾರೆ.

[[೧] ಅಧ್ಯಯನಲಕ್ಷಣವನ್ನು ಹೇಳಿದ ಮೇಲೆ.
[೨] ಗ್ರಂಥಭಾವಿತವಾದ ಬುದ್ಧಿಯನ್ನು ಅರ್ಥಜ್ಞಾನಕ್ಕೆ ತಕ್ಷಣವೇ ಇಳಿಸುವುದು ಸಾಧ್ಯವಾಗದುದರಿಂದ.
[೩] ಜ್ಞಾನದ ವಿಷಯಗಳಲ್ಲಿ.
[೪] ಇಲ್ಲಿ ಸಂಹಿತಾ ಎಂದರೆ ವರ್ಣಗಳ ಸಮೂಹ; ಉಪನಿಷತ್ ಎಂದರೆ ಉಪಾಸನೆ ಅಥವಾ ದರ್ಶನ. ಸಂಹಿತಾವಿಷಯವಾದ ಉಪಾಸನೆ ಎಂದು ಒಟ್ಟರ್ಥ.
[೫] ಪೃಥಿವ್ಯಾದಿ ಲೋಕವಿಷಯಕವಾದ ಉಪಾಸನೆ.
[೬] ಅಗ್ನ್ಯಾದಿ ಜ್ಯೋತಿರ್ವಿಷಯಕವಾದ ಉಪಾಸನೆ.
[೭] ಆಚಾರ್ಯಾದಿ ವಿಷಯಕವಾದ ಉಪಾಸನೆ.
[೮] ಪಿತ್ರಾದಿ ವಿಷಯಕವಾದ ಉಪಾಸನೆ.
[೯] ಶರೀರಸಂಬಂಧವಾದ ಜಿಹ್ವಾದಿವಿಷಯಕ ಉಪಾಸನೆ.
[೧೦] ಈ ಐದು ಉಪಾಸನೆಗಳನ್ನು.
[೧೧] ಲೋಕಗಳೇ ಮೊದಲಾದ ಮಹಾವಸ್ತುಗಳನ್ನೂ ಸಂಹಿತೆಗಳನ್ನೂ ಕುರಿತು ಉಪಾಸನೆಗಳಾದುದರಿಂದ ಮಹಾಸಂಹಿತೆಗಳು.]

**ಅಥ** = ಈಗ **ಅಧಿಲೋಕಂ** = ಅಧಿಲೋಕ— **ಪೃಥಿವೀ** = ಪೃಥ್ವಿಯು **ಪೂರ್ವರೂಪಂ** = ಹಿಂದಿನ ರೂಪ; **ದ್ಯೌಃ** = ದ್ಯುಲೋಕವು **ಉತ್ತರರೂಪಂ** = ಮುಂದಿನ ರೂಪ; **ಆಕಾಶಃ** = ಆಕಾಶವು **ಸಂಧಿಃ** = ಸಂಧಿ; **ವಾಯುಃ**=ವಾಯುವು **ಸಂಧಾನಂ** = ಸಂಧಾನ; **ಇತಿ** = ಎಂದು **ಅಧಿಲೋಕಂ** = ಅಧಿಲೋಕ.

**ಈಗ ಅಧಿಲೋಕ:** ಪೃಥ್ವಿಯು ಹಿಂದಿನ ರೂಪ;[೧] ದ್ಯುಲೋಕವು ಮುಂದಿನ ರೂಪ;[೨] ಆಕಾಶವು[೩] ಸಂಧಿ; ವಾಯುವು ಸಂಧಾನ;[೪] ಹೀಗೆ ಅಧಿಲೋಕ.

[ಈಗ ಅಧಿಲೋಕದ ಉಪಾಸನೆಯನ್ನು ಹೇಳಿದೆ. ಒಂದು ಕಡೆ ಪೃಥ್ವೀ, ಇನ್ನೊಂದು ಕಡೆ ದ್ಯುಲೋಕ, ಮಧ್ಯದಲ್ಲಿ ಆಕಾಶ; ವಾಯುವು ಪೃಥ್ವೀ-ದ್ಯುಲೋಕಗಳನ್ನು ಕೂಡಿಸುವ ಸಂಧಾನ. ಸಂಹಿತೆಯ ಹಿಂದಿನ ವರ್ಣ, ಮುಂದಿನ ವರ್ಣ, ಇವೆರಡರ ಸಂಧಿ ಮತ್ತು ಸಂಧಾನ—ಇವುಗಳಿಗೆ ಪೃಥ್ವೀ ಮೊದಲಾದುವುಗಳ ಸಾದೃಶ್ಯವುಂಟು. ಒಂದು ಪ್ರಸಿದ್ಧವಾದ ದೃಷ್ಟಾಂತದಿಂದ ಇದನ್ನು ಸ್ಪಷ್ಟಗೊಳಿಸಬಹುದು: 'ಇಷೇ ತ್ವಾ' ಎಂಬ ಯಜುರ್ವೇದೀಯ ಮಂತ್ರದ ಪಾಠಕಾಲದಲ್ಲಿ 'ಇಷೇ' ಎಂಬುದರ ಏಕಾರದೊಂದಿಗೆ 'ತ್ವಾ' ಎಂಬುದರ ತಕಾರವು ಸೇರಿಕೊಳ್ಳುವುದು. ಈ ತರಹ ಸಮ್ಮಿಳನವಿಷಯಕವಾದ ಉಪಾಸನೆಯನ್ನು ಇಲ್ಲಿ ಹೇಳಿದೆ. ಏಕಾರವು ಹಿಂದಿನ ವರ್ಣವಾದ ಪೃಥ್ವೀ, ತಕಾರವು ಮುಂದಿನ ವರ್ಣವಾದ ದ್ಯುಲೋಕ. 'ಏ, ತ್ವಾ' ಇವುಗಳ ನಡುವೆ ಇರುವುದು ಅಂತರಿಕ್ಷ. ಉಚ್ಚಾರಣಕಾಲದಲ್ಲಿ 'ಇಷೇ(ತ್)ತ್ವಾ' ಎಂದಾಗುವ ದ್ವಿತ್ವದ ತಕಾರವು ಉಭಯವರ್ಣಗಳನ್ನೂ ಕೂಡಿಸುತ್ತದೆ. ಇದನ್ನು ವಾಯುವೆಂದು ಭಾವಿಸಬೇಕು. ವರ್ಣಾದಿಗಳನ್ನು ಅವಲಂಬಿಸಿ ಪೃಥ್ವೀ ಮೊದಲಾದುವುಗಳ ಅಭಿಮಾನಿದೇವತೆಗಳನ್ನು ಚಿಂತಿಸಬೇಕು ಎಂಬುದು ಇದರ ತಾತ್ಪರ್ಯ.

[೧] ಹಿಂದಿನ ವರ್ಣ. ಇದರಲ್ಲಿ ಪೃಥಿವೀದೃಷ್ಟಿಯನ್ನು ಮಾಡಬೇಕು.

[೨] ಸಂಹಿತೆಯ ಮುಂದಿನ ವರ್ಣದಲ್ಲಿ ದ್ಯುಲೋಕದೃಷ್ಟಿಯನ್ನು ಮಾಡಬೇಕು.

[೩] ಅಂತರಿಕ್ಷ.

[೪] ಇವೆರಡನ್ನು ಸೇರಿಸುವುದರಿಂದ ವಾಯುವಿಗೆ ಸಂಧಾನವೆಂದು ಹೆಸರು.]

**ಅಥ** = ಈಗ **ಅಧಿಜ್ಯೌತಿಷಂ** = ಅಧಿಜ್ಯೌತಿಷ— **ಅಗ್ನಿಃ** = ಅಗ್ನಿಯು **ಪೂರ್ವರೂಪಂ** = ಹಿಂದಿನ ರೂಪ; **ಆದಿತ್ಯಃ** = ಆದಿತ್ಯನು **ಉತ್ತರರೂಪಂ** = ಮುಂದಿನ ರೂಪ; **ಆಪಃ** = ನೀರು **ಸಂಧಿಃ** = ಸಂಧಿ; **ವೈದ್ಯುತಃ** = ಮಿಂಚು **ಸಂಧಾನಂ** = ಸಂಧಾನ; **ಇತಿ** = ಎಂದು **ಅಧಿಜ್ಯೌತಿಷಂ** = ಅಧಿಜ್ಯೌತಿಷ.

**ಈಗ ಅಧಿಜ್ಯೌತಿಷ:** ಅಗ್ನಿಯು ಹಿಂದಿನ ರೂಪ; ಆದಿತ್ಯನು ಮುಂದಿನ ರೂಪ; ನೀರು ಸಂಧಿ; ಮಿಂಚು ಸಂಧಾನ; ಹೀಗೆ ಅಧಿಜ್ಯೌತಿಷ.

[ಜ್ಯೋತಿಯೇ ಭೂಮಿಯಲ್ಲಿ ಅಗ್ನಿಯಾಗಿಯೂ ಅಂತರಿಕ್ಷದಲ್ಲಿ ಮಿಂಚಾಗಿಯೂ ಸ್ವರ್ಗದಲ್ಲಿ ಆದಿತ್ಯನಾಗಿಯೂ ಪ್ರಕಾಶಿಸುತ್ತದೆ. ಇದಕ್ಕೂ ಬ್ರಹ್ಮಕ್ಕೂ ಸಾದೃಶ್ಯವಿದೆ.]

**ಅಥ** = ಈಗ **ಅಧಿವಿದ್ಯಂ**=ಅಧಿವಿದ್ಯ—**ಆಚಾರ್ಯಃ**=ಆಚಾರ್ಯನು **ಪೂರ್ವರೂಪಂ** = ಹಿಂದಿನ ರೂಪ; **ಅಂತೇವಾಸೀ** = ಶಿಷ್ಯನು **ಉತ್ತರರೂಪಂ** = ಮುಂದಿನ ರೂಪ; **ವಿದ್ಯಾ**=ವಿದ್ಯೆಯು **ಸಂಧಿಃ**=ಸಂಧಿ; **ಪ್ರವಚನಂ**=ಉಪದೇಶವು **ಸಂಧಾನಂ**=ಸಂಧಾನ; **ಇತಿ** = ಎಂದು **ಅಧಿವಿದ್ಯಂ** = ಅಧಿವಿದ್ಯ.

**ಈಗ ಅಧಿವಿದ್ಯ:** ಆಚಾರ್ಯನು ಹಿಂದಿನ ರೂಪ; ಶಿಷ್ಯನು ಮುಂದಿನ ರೂಪ; ವಿದ್ಯೆಯು ಸಂಧಿ; ಉಪದೇಶವು ಸಂಧಾನ; ಹೀಗೆ ಅಧಿವಿದ್ಯ.

**ಅಥ** = ಈಗ **ಅಧಿಪ್ರಜಂ** = ಅಧಿಪ್ರಜ—**ಮಾತಾ** = ತಾಯಿಯು **ಪೂರ್ವರೂಪಂ**=ಹಿಂದಿನ ರೂಪ; **ಪಿತಾ** = ತಂದೆಯು **ಉತ್ತರರೂಪಂ** = ಮುಂದಿನ ರೂಪ; **ಪ್ರಜಾ** = ಪ್ರಜೆಯು; **ಸಂಧಿಃ** = ಸಂಧಿ; **ಪ್ರಜನನಂ**=ಪ್ರಜನನವು **ಸಂಧಾನಂ**=ಸಂಧಾನ; **ಇತಿ** = ಎಂದು **ಅಧಿಪ್ರಜಂ** = ಅಧಿಪ್ರಜ.

**ಈಗ ಅಧಿಪ್ರಜ:** ತಾಯಿಯು ಹಿಂದಿನ ರೂಪ; ತಂದೆಯು ಮುಂದಿನ ರೂಪ; ಪ್ರಜೆಯು ಸಂಧಿ; ಪ್ರಜನನವು ಸಂಧಾನ; ಹೀಗೆ ಅಧಿಪ್ರಜ.

**ಅಥ** = ಈಗ **ಅಧ್ಯಾತ್ಮಂ** = ಅಧ್ಯಾತ್ಮ—**ಅಧರಾ ಹನುಃ** = ಕೆಳದವಡೆಯು **ಪೂರ್ವರೂಪಂ**= ಹಿಂದಿನ ರೂಪ; **ಉತ್ತರಾ ಹನುಃ** = ಮೇಲುದವಡೆಯು **ಉತ್ತರರೂಪಂ** = ಮುಂದಿನ ರೂಪ; **ವಾಕ್** = ಮಾತು **ಸಂಧಿಃ** = ಸಂಧಿ; **ಜಿಹ್ವಾ** = ನಾಲಗೆಯು **ಸಂಧಾನಂ** = ಸಂಧಾನ; **ಇತಿ** = ಎಂದು **ಅಧ್ಯಾತ್ಮಂ** = ಅಧ್ಯಾತ್ಮ.

**ಈಗ ಅಧ್ಯಾತ್ಮ:** ಕೆಳದವಡೆಯು ಹಿಂದಿನ ರೂಪ; ಮೇಲುದವಡೆಯು ಮುಂದಿನ ರೂಪ; ಮಾತು ಸಂಧಿ; ನಾಲಗೆಯು ಸಂಧಾನ; ಹೀಗೆ ಅಧ್ಯಾತ್ಮ.

**ಇತಿ ಇಮಾಃ** = ಹೀಗೆ ಇವು **ಮಹಾಸಂಹಿತಾಃ**=ಮಹಾಸಂಹಿತೆಗಳು. **ಯಃ** = ಯಾವನು **ಏತಾಃ** = ಈ **ವ್ಯಾಖ್ಯಾತಾಃ** = ವ್ಯಾಖ್ಯಾನ ಮಾಡಿದ **ಮಹಾಸಂಹಿತಾಃ** = ಮಹಾಸಂಹಿತೆಗಳನ್ನು **ಏವಂ** = ಹೀಗೆ **ವೇದ** = ಉಪಾಸಿಸುತ್ತಾನೆಯೊ [**ಸಃ** = ಅವನು] **ಪ್ರಜಯಾ** = ಪ್ರಜೆಯೊಂದಿಗೆ **ಪಶುಭಿಃ** = ಪಶುಗಳೊಂದಿಗೆ **ಬ್ರಹ್ಮವರ್ಚಸೇನ**= ಬ್ರಹ್ಮವರ್ಚಸ್ಸಿನೊಂದಿಗೆ **ಅನ್ನಾದ್ಯೇನ** = ಅನ್ನಾದಿಗಳೊಂದಿಗೆ **ಸುವರ್ಗ್ಯೇಣ ಲೋಕೇನ** = ಸ್ವರ್ಗಲೋಕದೊಂದಿಗೆ **ಸಂಧೀಯತೇ** = ಸೇರಿಸಲ್ಪಡುತ್ತಾನೆ.

ಹೀಗೆ ಇವು ಮಹಾಸಂಹಿತೆಗಳು. ವ್ಯಾಖ್ಯಾನಮಾಡಿದ ಈ ಮಹಾಸಂಹಿತೆಗಳನ್ನು ಯಾವನು ಉಪಾಸಿಸುವನೊ ಅವನು ಪ್ರಜೆ, ಪಶುಗಳು, ಬ್ರಹ್ಮವರ್ಚಸ್ಸು, ಅನ್ನವೇ ಮೊದಲಾದುವು, ಸ್ವರ್ಗಲೋಕ–ಇವುಗಳನ್ನು ಹೊಂದುತ್ತಾನೆ.

## ನಾಲ್ಕನೆಯ ಅನುವಾಕ

ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋಽಧ್ಯಮೃತಾತ್ ಸಂಬಭೂವ । ಸ ಮೇಂದ್ರೋ ಮೇಧಯಾ ಸ್ಪೃಣೋತು । ಅಮೃತಸ್ಯ ದೇವ ಧಾರಣೋ ಭೂಯಾಸಮ್ । ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಮ್ । ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ । ಶ್ರುತಂ ಮೇ ಗೋಪಾಯ । ಆವಹಂತೀ ವಿತನ್ವಾನಾ । ಕುರ್ವಾಣಾಚೀರಮಾತ್ಮನಃ । ವಾಸಾಗ್ಂಸಿ ಮಮ ಗಾವಶ್ಚ । ಅನ್ನಪಾನೇ ಚ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ । ಆ ಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ । ವಿ ಮಾಽಽಯಂತು ಬ್ರಹ್ಮಚಾರಿಣಃ ಸ್ವಾಹಾ । ಪ್ರಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ದಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ಶಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ಯಶೋ ಜನೇಽಸಾನಿ ಸ್ವಾಹಾ । ಶ್ರೇಯಾನ್ ವಸ್ಯಸೋಽಸಾನಿ ಸ್ವಾಹಾ । ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ । ಸ ಮಾ ಭಗ ಪ್ರವಿಶ ಸ್ವಾಹಾ । ತಸ್ಮಿಂತ್ಸಹಸ್ರಶಾಖೇ । ನಿ ಭಗಾಹಂ ತ್ವಯಿ ಮೃಜೇ ಸ್ವಾಹಾ । ಯಥಾಽಽಪಃ ಪ್ರವತಾಽಽಯಂತಿ । ಯಥಾ ಮಾಸಾ ಅಹರ್ಜರಮ್ । ಏವಂ ಮಾಂ ಬ್ರಹ್ಮಚಾರಿಣಃ । ಧಾತರಾಯಂತು ಸರ್ವತಃ ಸ್ವಾಹಾ । ಪ್ರತಿವೇಶೋಽಸಿ । ಪ್ರ ಮಾ ಭಾಹಿ । ಪ್ರ ಮಾ ಪದ್ಯಸ್ವ ।

ಯಃ = ಯಾವನು ಛಂದಸಾಂ = ವೇದಗಳಿಗೆ ಋಷಭಃ = ಋಷಭನಾಗಿರುವನೊ, ವಿಶ್ವರೂಪಃ = ಸರ್ವರೂಪನಾಗಿರುವನೊ ಅಮೃತಾತ್ ಛಂದೋಭ್ಯಃ= ಅಮೃತಸ್ವರೂಪವಾದ ವೇದಗಳಿಂದ ಅಧಿ ಸಂಬಭೂವ = ಉದ್ಭವಿಸಿರುವನೊ ಸಃ ಇಂದ್ರಃ = ಆ ಇಂದ್ರನು ಮಾ = ನನ್ನನ್ನು ಮೇಧಯಾ = ಪ್ರಜ್ಞೆಯಿಂದ ಸ್ಪೃಣೋತು = ಬಲಪಡಿಸಲಿ. ದೇವ = ಎಲೈ ದೇವನೆ, ಅಮೃತಸ್ಯ = ಬ್ರಹ್ಮಜ್ಞಾನದ ಧಾರಣಃ = ಧಾರಕನು ಭೂಯಾಸಂ=ನಾನಾಗಲಿ. ಮೇ=ನನ್ನ ಶರೀರಂ=ಶರೀರವು ವಿಚರ್ಷಣಂ = ಯೋಗ್ಯವು [ಭೂಯಾತ್=ಆಗಲಿ] ಮೇ=ನನ್ನ ಜಿಹ್ವಾ=ನಾಲಗೆಯು ಮಧುಮತ್ತಮಾ = ಸವಿಮಾತನ್ನಾಡುವುದಾಗಲಿ. ಕರ್ಣಾಭ್ಯಾಂ = ಕಿವಿಗಳಿಂದ ಭೂರಿ = ಹೆಚ್ಚು ವಿಶ್ರುವಂ = ಕೇಳುವವನಾಗಲಿ. ಬ್ರಹ್ಮಣಃ = ಬ್ರಹ್ಮದ ಕೋಶಃ ಅಸಿ = ಕೋಶವಾಗಿದ್ದೀಯೆ; ಮೇಧಯಾ = ಲೌಕಿಕಜ್ಞಾನದಿಂದ ಪಿಹಿತಃ = ಮುಚ್ಚಲ್ಪಟ್ಟಿರುತ್ತೀಯೆ. ಮೇ = ನನ್ನ ಶ್ರುತಂ = ವಿಜ್ಞಾನವನ್ನು ಗೋಪಾಯ = ಕಾಪಾಡು.

ಯಾವನು ವೇದಗಳಿಗೆ ಋಷಭನಾಗಿರುವನೊ,[೧] ಸರ್ವರೂಪನಾಗಿರುವನೊ,[೨] ಅಮೃತಸ್ವರೂಪವಾದ ವೇದಗಳಿಂದ ಉದ್ಭವಿಸಿರುವನೊ ಆ ಇಂದ್ರನು[೩] ನನ್ನನ್ನು ಪ್ರಜ್ಞೆಯಿಂದ ಬಲಪಡಿಸಲಿ. ಎಲೈ ದೇವನೆ, ನಾನು ಬ್ರಹ್ಮಜ್ಞಾನವನ್ನು ಹೊಂದುವಂತಾಗಲಿ. ನನ್ನ ಶರೀರವು ಯೋಗ್ಯವಾಗಲಿ. ನನ್ನ ನಾಲಗೆಯು ಸವಿಮಾತನ್ನಾಡುವುದಾಗಲಿ. ನಾನು ಕಿವಿಗಳಿಂದ ಹೆಚ್ಚು ಕೇಳುವವನಾಗಲಿ.[೪] ನೀನು ಬ್ರಹ್ಮದ ಕೋಶವಾಗಿರುತ್ತೀಯೆ;[೫] ಲೌಕಿಕ ಜ್ಞಾನದಿಂದ ಮುಚ್ಚಲ್ಪಟ್ಟಿರುತ್ತೀಯೆ;[೬] ನನ್ನ ವಿಜ್ಞಾನವನ್ನು[೭] ಕಾಪಾಡು.[೮]

[ಇಲ್ಲಿ ಮೇಧಾಕಾಮನಾದವನು ಜಪಿಸಬೇಕಾದ ಮಂತ್ರಗಳನ್ನು ಹೇಳಿದೆ.

೧ ಪ್ರಧಾನನಾಗಿರುವುದರಿಂದ.

೨ ಎಲ್ಲ ವಾಕ್ಕುಗಳನ್ನು ವ್ಯಾಪಿಸಿಕೊಂಡಿರುವುದರಿಂದ ಓಂಕಾರವನ್ನು ಋಷಭನೆಂದು ಹೇಳಿದೆ. ಇಲ್ಲಿ ಓಂಕಾರವು ಉಪಾಸ್ಯವಾಗಿರುವುದು.

೩ ಓಂಕಾರಸ್ವರೂಪನಾದ ಪರಮೇಶ್ವರನು.

೪ ದೇಹೇಂದ್ರಿಯಗಳ ಸಮೂಹವು ಆತ್ಮಜ್ಞಾನಕ್ಕೆ ಯೋಗ್ಯವಾಗಲಿ ಎಂಬುದು ವಾಕ್ಯಾರ್ಥ.

೫ ಒರೆಯು ಕತ್ತಿಗೆ ಆಧಾರವಾಗಿರುವಂತೆ ಬ್ರಹ್ಮವನ್ನು ಅರಿಯಲು ಓಂಕಾರವು ಆಧಾರವಾಗಿರುತ್ತದೆ. ಪ್ರಣವವು ಬ್ರಹ್ಮಕ್ಕೆ ಪ್ರತೀಕವಾಗಿದ್ದು ಅದರ ಮೂಲಕ ಬ್ರಹ್ಮವು ಲಭಿಸುತ್ತದೆ.

೬ ಸಾಮಾನ್ಯಜ್ಞಾನವುಳ್ಳವರಿಗೆ ತತ್ತ್ವವು ತಿಳಿಯುವುದಿಲ್ಲ ಎಂದರ್ಥ.

೭ ಶ್ರವಣಪೂರ್ವಕವಾದ ಜ್ಞಾನ.

೮ ಅದು ಪ್ರಾಪ್ತವಾಗುವಂತೆಯೂ ಮತ್ತು ಮರೆಯದಂತೆಯೂ ಮಾಡು.]

**ತತಃ**=ಅನಂತರ **ಮಮ ಆತ್ಮನಃ** = ನನಗೆ **ಅನ್ನಪಾನೇ** = ಅನ್ನಪಾನಗಳನ್ನು **ವಾಸಾಂಸಿ** = ಬಟ್ಟೆಗಳನ್ನು **ಗಾವಃ ಚ [ಗಾಃ]** = ಹಸುಗಳನ್ನು **ಸರ್ವದಾ** = ಯಾವಾಗಲೂ **ಆವಹಂತೀ** = ತರುವವಳಾಗಿ **ವಿತನ್ವಾನಾ** = ಹೆಚ್ಚಿಸುವವಳಾಗಿ **ಅಚೀರಂ ಕುರ್ವಾಣಾ**=ಶೀಘ್ರವಾಗಿ ಮಾಡುವವಳಾಗಿ [**ಯಾ ಶ್ರೀಃ**=ಯಾವ ಶ್ರೀ ಇರುವಳೊ] **ಪಶುಭಿಃ ಸಹ** = ಪಶುಗಳೊಂದಿಗೆ [**ತಾಂ** = ಆ] **ಲೋಮಶಾಂ** = ತುಪ್ಪಟದಿಂದ ಕೂಡಿದ **ಶ್ರಿಯಂ** = ಸಂಪತ್ತನ್ನು **ಮೇ** = ನನಗೆ **ಆವಹ** = ತರುವನಾಗು, **ಸ್ವಾಹಾ** = ಸ್ವಾಹಾ. **ಬ್ರಹ್ಮಚಾರಿಣಃ** = ಬ್ರಹ್ಮಚಾರಿಗಳು **ಮಾ** = ನನ್ನಲ್ಲಿಗೆ **ಆಯಂತು** = ಬರಲಿ. **ಸ್ವಾಹಾ** = ಸ್ವಾಹಾ. **ಬ್ರಹ್ಮಚಾರಿಣಃ** = ಬ್ರಹ್ಮಚಾರಿಗಳು **ಮಾ** = ನನ್ನಲ್ಲಿಗೆ **ವಿ** = ವಿವಿಧ ಕಡೆಗಳಿಂದ **ಆಯಂತು**=ಬರಲಿ. **ಸ್ವಾಹಾ**=ಸ್ವಾಹಾ. **ಬ್ರಹ್ಮಚಾರಿಣಃ**= ಬ್ರಹ್ಮಚಾರಿಗಳು **ಮಾ** = ನನ್ನಲ್ಲಿಗೆ **ಪ್ರ** = ಪ್ರಕೃಷ್ಟರೂಪದಿಂದ **ಆಯಂತು** = ಬರಲಿ. **ಸ್ವಾಹಾ** = ಸ್ವಾಹಾ. **ಬ್ರಹ್ಮಚಾರಿಣಃ** = ಬ್ರಹ್ಮಚಾರಿಗಳು **ದಮಾಯಂತು** = ದಮವುಳ್ಳವರಾಗಿರಲಿ. **ಸ್ವಾಹಾ** = ಸ್ವಾಹಾ. **ಬ್ರಹ್ಮಚಾರಿಣಃ** = ಬ್ರಹ್ಮಚಾರಿಗಳು **ಶಮಾಯಂತು** = ಶಮವುಳ್ಳವರಾಗಿರಲಿ, **ಸ್ವಾಹಾ** = ಸ್ವಾಹಾ.

ಅನಂತರ[೧] ಅನ್ನಪಾನಗಳನ್ನೂ ಬಟ್ಟೆಗಳನ್ನೂ ಹಸುಗಳನ್ನೂ ಯಾವಾಗಲೂ ತರುವವಳಾದ, ಹೆಚ್ಚಿಸುವವಳಾದ ಮತ್ತು ಶೀಘ್ರವಾಗಿ ಮಾಡುವವಳಾದ, ಹಸುಗಳಿಂದ ಕೂಡಿದ, ತುಪ್ಪಟದಿಂದ ಕೂಡಿದ[೨] ಶ್ರೀಯನ್ನು ನನಗೆ ತರುವನಾಗು.[೩] ಬ್ರಹ್ಮಚಾರಿಗಳು ನನ್ನಲ್ಲಿಗೆ ಬರಲಿ, ಸ್ವಾಹಾ[೪]. ಬ್ರಹ್ಮಚಾರಿಗಳು ನನ್ನಲ್ಲಿಗೆ ವಿವಿಧ ಕಡೆಗಳಿಂದ ಬರಲಿ, ಸ್ವಾಹಾ.[೪] ಬ್ರಹ್ಮಚಾರಿಗಳು ನನ್ನಲ್ಲಿಗೆ ಪ್ರಕೃಷ್ಟರೂಪದಿಂದ ಬರಲಿ, ಸ್ವಾಹಾ. ಬ್ರಹ್ಮಚಾರಿಗಳು ದಮವುಳ್ಳವರಾಗಿರಲಿ, ಸ್ವಾಹಾ. ಬ್ರಹ್ಮಚಾರಿಗಳು ಶಮವುಳ್ಳವರಾಗಿರಲಿ, ಸ್ವಾಹಾ.

[ಇಲ್ಲಿ ಶ್ರೀಕಾಮನಾದವನಿಗೆ ಹೋಮಮಾಡಲು ಬೇಕಾದ ಮಂತ್ರಗಳನ್ನು ಹೇಳಿದೆ.

[೧] ಮೇಧಾಶಕ್ತಿಯನ್ನುಂಟುಮಾಡಿದ ಮೇಲೆ; ಏಕೆಂದರೆ ಮೇಧಸ್ಸಿಲ್ಲದಿದ್ದರೆ ಸಂಪತ್ತಿನಿಂದ ಅನರ್ಥವುಂಟಾಗುತ್ತದೆ.

[೨] ಆಡು ಕುರಿ ಮೊದಲಾದುವು.

[೩] ಇದನ್ನು ಓಂಕಾರವನ್ನು ಕುರಿತು ಹೇಳಿದೆ.

[೪] ಸ್ವಾಹಾಕಾರವು ಹೋಮಕ್ಕಾಗಿ ಹೇಳಿದ ಮಂತ್ರದ ಅಂತವನ್ನು ಸೂಚಿಸುತ್ತದೆ.]

**ಜನೇ** = ಜನರಲ್ಲಿ **ಯಶಃ ಅಸಾನಿ** = ಯಶಸ್ವಿಯಾಗಲಿ. **ಸ್ವಾಹಾ** = ಸ್ವಾಹಾ. **ವಸ್ಯಸಃ [ವಸೀಯಸಃ]**=ಧನಿಕರಲ್ಲಿ **ಶ್ರೇಯಾನ್ ಅಸಾನಿ**=ಹೆಚ್ಚಿನ ಧನಿಕನಾಗಲಿ. **ಸ್ವಾಹಾ** = ಸ್ವಾಹಾ. **ಭಗ** = ಎಲೈ ಭಗವಂತನೆ, **ತಂ ತ್ವಾ** = ಅಂತಹ ನಿನ್ನನ್ನು **ಪ್ರವಿಶಾನಿ** = ಪ್ರವೇಶಿಸುವಂತಾಗಲಿ. **ಸ್ವಾಹಾ** = ಸ್ವಾಹಾ. **ಭಗ** = ಎಲೈ ಭಗವಂತನೆ **ಸಃ [ತ್ವಂ ಅಪಿ]** = ಅಂತಹ ನೀನು **ಮಾ** = ನನ್ನನ್ನು **ಪ್ರವಿಶ** = ಪ್ರವೇಶಿಸು. **ಸ್ವಾಹಾ** = ಸ್ವಾಹಾ. **ಭಗ** = ಎಲೈ ಭಗವಂತನೆ, **ಸಹಸ್ರಶಾಖೇ**=ಸಹಸ್ರ ಶಾಖೆಗಳುಳ್ಳ **ತಸ್ಮಿನ್**

**ತ್ವಯಿ** = ಅಂತಹ ನಿನ್ನಲ್ಲಿ **ನಿಮೃಜೇ** = ತೊಳೆದುಕೊಳ್ಳುತ್ತೇನೆ. **ಸ್ವಾಹಾ** = ಸ್ವಾಹಾ. **ಧಾತಃ** = ಎಲೈ ವಿಧಾತ, **ಯಥಾ** = ಹೇಗೆ **ಆಪಃ** = ನೀರು **ಪ್ರವತಾ ಯಂತಿ** = ತಗ್ಗಿನ ಪ್ರದೇಶಕ್ಕೆ ಹರಿಯುವುವೊ, **ಯಥಾ** = ಹೇಗೆ **ಮಾಸಾಃ**=ತಿಂಗಳುಗಳು **ಅಹರ್ಜರಂ** [**ಯಂತಿ**] = ಸಂವತ್ಸರವನ್ನು ಸೇರುವುವೊ, **ಏವಂ** = ಹಾಗೆಯೇ **ಮಾಂ** = ನನ್ನನ್ನು **ಬ್ರಹ್ಮಚಾರಿಣಃ** = ಬ್ರಹ್ಮಚಾರಿಗಳು **ಸರ್ವತಃ** = ಎಲ್ಲ ಕಡೆಯಿಂದಲೂ **ಆಯಂತು** = ಬಂದು ಸೇರಲಿ. **ಸ್ವಾಹಾ** = ಸ್ವಾಹಾ. **ಪ್ರತಿವೇಶಃ ಅಸಿ** = ವಿಶ್ರಾಮಸ್ಥಾನವಾಗಿರುತ್ತಿಯೆ. **ಮಾ** = ನನಗೆ **ಪ್ರಭಾಹಿ** = ಪ್ರಕಾಶಿಸು, ಆತ್ಮಸ್ವರೂಪವನ್ನು ತೋರಿಸು. **ಮಾ** = ನನ್ನನ್ನು **ಪ್ರಪದ್ಯಸ್ವ** = ಹೊಂದು.

ಜನರಲ್ಲಿ ನಾನು ಯಶಸ್ವಿಯಾಗಲಿ, ಸ್ವಾಹಾ. ಧನಿಕರಲ್ಲಿ ನಾನು ಹೆಚ್ಚಿನ ಧನಿಕನಾಗಲಿ, ಸ್ವಾಹಾ. ಎಲೈ ಭಗವಂತನೆ, ಅಂತಹ[೧] ನಿನ್ನನ್ನು ನಾನು ಪ್ರವೇಶಿಸುವಂತಾಗಲಿ,[೨] ಸ್ವಾಹಾ. ಎಲೈ ಭಗವಂತನೆ, ಅಂತಹ ನೀನು ನನ್ನನ್ನು ಪ್ರವೇಶಿಸು,[೩] ಸ್ವಾಹಾ. ಎಲೈ ಭಗವಂತನೆ, ಸಹಸ್ರಶಾಖೆಗಳುಳ್ಳ ಅಂತಹ ನಿನ್ನಲ್ಲಿ (ಪಾಪವನ್ನು) ತೊಳೆದುಕೊಳ್ಳುತ್ತೇನೆ, ಸ್ವಾಹಾ. ಎಲೈ ವಿಧಾತ, ನೀರು ತಗ್ಗಿನ ಪ್ರದೇಶಕ್ಕೆ ಹರಿಯುವಂತೆ, ತಿಂಗಳುಗಳು ಸಂವತ್ಸರವನ್ನು ಸೇರುವಂತೆ, ಬ್ರಹ್ಮಚಾರಿಗಳು ಎಲ್ಲ ಕಡೆಯಿಂದಲೂ ಬಂದು ನನ್ನನ್ನು ಸೇರಿಕೊಳ್ಳಲಿ, ಸ್ವಾಹಾ. ನೀನು ವಿಶ್ರಾಮಸ್ಥಾನವಾಗಿರುತ್ತೀಯೆ.[೪] ನನಗೆ ಆತ್ಮಸ್ವರೂಪವನ್ನು ತೋರಿಸು, ನನ್ನನ್ನು ಹೊಂದು.[೫]

[೧ ಬ್ರಹ್ಮಕ್ಕೆ ಕೋಶವಾಗಿರುವ.

೨ ನಿನ್ನ ಆತ್ಮವೇ ಆಗಲಿ.

೩ ನಮ್ಮಿಬ್ಬರಿಗೂ ಏಕತ್ವ ಉಂಟಾಗಲಿ.

೪ ನಿನ್ನನ್ನು ಉಪಾಸನೆಮಾಡುವವರಿಗೆ ಸಮಸ್ತದುಃಖವನ್ನೂ ಕಳೆಯುವ ಸ್ಥಾನವಾಗಿರುತ್ತೀಯೆ.

೫ ನಿನ್ನ ಆತ್ಮವೇ ಆಗುವಂತೆ ಮಾಡು.]

## ಐದನೆಯ ಅನುವಾಕ

ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮು ಹ ಸ್ಮೈತಾಂ ಚತುರ್ಥೀಮ್ । ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಮ್ । ಸುವರಿತ್ಯಸೌ ಲೋಕಃ । ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಗ್ಂಷಿ ಮಹೀಯಂತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಗ್ಂಷಿ । ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀಯಂತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಮ್ । ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ । ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾಃ ಬಲಿಮಾವಹಂತಿ ॥ ಇತಿ ಪಂಚಮೋಽನುವಾಕಃ ॥

ಭೂಃ = ಭೂಃ ಭುವಃ = ಭುವಃ ಸುವಃ = ಸುವಃ ಇತಿ = ಎಂದು ಏತಾಃ ವೈ ತಿಸ್ರಃ = ಈ ಮೂರು ವ್ಯಾಹೃತಯಃ = ವ್ಯಾಹೃತಿಗಳು. ತಾಸಾಂ ಉ ಹ ಸ್ಮ = ಅವುಗಳಲ್ಲಿ ಏತಾಂ ಚತುರ್ಥೀಂ = ಈ ನಾಲ್ಕನೆಯದನ್ನು ಮಹಃ ಇತಿ = ಮಹಃ ಎಂದು ಮಾಹಾಚಮಸ್ಯಃ = ಮಾಹಾಚಮಸ್ಯನು ಪ್ರವೇದಯತೇ = ತಿಳಿದು

ಕೊಂಡನು. **ತತ್ ಬ್ರಹ್ಮ**=ಅದು ಬ್ರಹ್ಮ, **ಸಃ ಆತ್ಮಾ**=ಅವನು [ಅದು] ಆತ್ಮ. **ಅನ್ಯಾಃ**=ಉಳಿದ **ದೇವತಾಃ**=ದೇವತೆಗಳು **ಅಂಗಾನಿ**=ಅಂಗಗಳು.

ಭೂಃ ಭುವಃ ಸುವಃ ಎಂದು ಮೂರು ವ್ಯಾಹೃತಿಗಳು.[೧] ಅವುಗಳಲ್ಲಿ ನಾಲ್ಕನೆಯದನ್ನು ಮಹಃ ಎಂದು ಮಾಹಾಚಮಸ್ಯನು[೨] ತಿಳಿದುಕೊಂಡನು. ಅದು ಬ್ರಹ್ಮ, ಅದು ಆತ್ಮ. ಉಳಿದ ದೇವತೆಗಳು ಅಂಗಗಳು.

[ಇಲ್ಲಿ ವ್ಯಾಹೃತಿರೂಪವಾದ ಬ್ರಹ್ಮದ ಅಂತರುಪಾಸನೆಯನ್ನು ಹೇಳಿದೆ. ಇದರ ಫಲ ಸ್ವಾರಾಜ್ಯ.

[೧] ವ್ಯಾಹೃತಿ ಎಂದರೆ ಉಚ್ಚಾರಣೆ. ಭೂಃ ಭುವಃ ಸುವಃ ಮಹಃ ಜನಃ ತಪಃ ಸತ್ಯಂ ಎಂಬಿವು ಏಳು ವ್ಯಾಹೃತಿಗಳು. ಅಗ್ನಿಹೋತ್ರಾದಿ ಕರ್ಮಗಳಲ್ಲಿ ಇವುಗಳನ್ನು ಉಚ್ಚರಿಸುವುದರಿಂದ ಇವುಗಳಿಗೆ ವ್ಯಾಹೃತಿಗಳೆಂದು ಹೆಸರು ಬಂದಿದೆ. ಮಹಃ ಎಂಬ ನಾಲ್ಕನೆಯ ವ್ಯಾಹೃತಿಯನ್ನು ಕಂಡುಹಿಡಿದವನು ಮಾಹಾಚಮಸ್ಯ ಎಂಬ ಋಷಿ. ಮಹಃ ಎಂಬುದೇ ಬ್ರಹ್ಮ. ಏಕೆಂದರೆ ಮಹಃ ಎಂಬ ಶಬ್ದಕ್ಕೂ ಬ್ರಹ್ಮ ಎಂಬುದಕ್ಕೂ ದೊಡ್ಡದು ಎಂಬ ಒಂದೇ ಅರ್ಥವುಂಟು. ಇದೇ ಆತ್ಮ. ಯಾವುದು ಎಲ್ಲವನ್ನೂ ವ್ಯಾಪಿಸಿಕೊಳ್ಳುವುದೊ ಅದೇ ಆತ್ಮ. ಆತ್ಮಪದವು 'ಆಪ್' (ವ್ಯಾಪಿಸು) ಎಂಬ ಧಾತುವಿನಿಂದ ಬಂದಿದೆ. ಮಹಃ ಎಂಬ ವ್ಯಾಹೃತಿಯು ಪೂರ್ಣವಾದ ಆತ್ಮ ವಾದರೆ ಇತರ ವ್ಯಾಹೃತಿಗಳು ಅಂಗಗಳು.

ಭೂಃ ಎಂಬುದು ಈ ಲೋಕ, ಅಗ್ನಿ, ಋಕ್ಕುಗಳು, ಪ್ರಾಣ–ಇವುಗಳನ್ನು ಸೂಚಿಸುತ್ತದೆ. ಭುವಃ ಎಂಬುದು ಅಂತರಿಕ್ಷ, ವಾಯು, ಸಾಮಗಳು, ಅಪಾನ–ಇವುಗಳನ್ನು ಸೂಚಿಸುತ್ತದೆ. ಸುವಃ ಎಂಬುದು ಸ್ವರ್ಗ, ಆದಿತ್ಯ, ಯಜುಸ್ಸುಗಳು, ವ್ಯಾನ–ಇವುಗಳನ್ನು ಸೂಚಿಸುತ್ತದೆ. ನಾಲ್ಕನೆಯ ವ್ಯಾಹೃತಿಯಾದ ಮಹಃ ಎಂಬುದು ಆದಿತ್ಯ, ಚಂದ್ರ, ಓಂಕಾರ, ಅನ್ನ—ಇವುಗಳನ್ನು ಸೂಚಿಸುತ್ತದೆ. ಹೀಗೆ ಪ್ರತಿಯೊಂದು ವ್ಯಾಹೃತಿಯೂ ನಾಲ್ಕು ನಾಲ್ಕಾಗಿ ಒಟ್ಟು ಹದಿನಾರಾಗಿದೆ. ಈ ವ್ಯಾಹೃತಿಗಳನ್ನು ಅವುಗಳ ನಾಲ್ಕು ಪ್ರಕಾರಗಳಲ್ಲಿಯೂ ಉಪಾಸಿಸಬೇಕು. ಷೋಡಶ-ವ್ಯಾಹೃತಿರೂಪವಾದ ಬ್ರಹ್ಮವೇ ಇತರ ಉಪನಿಷತ್ತುಗಳಲ್ಲಿ ಪ್ರಸಿದ್ಧವಾದ ಷೋಡಶ ಕಲಾಪುರುಷ.

[೨] ಸೋಮಯಾಗಗಳಲ್ಲಿ ಉಪಯೋಗಿಸುವ ಪಾತ್ರೆಗೆ ಚಮಸವೆಂದು ಹೆಸರು. ಅನೇಕ ಸೋಮಯಾಗಗಳನ್ನು ಮಾಡಿದವನಿಗೆ ಮಹಾಚಮಸನೆಂದು ಹೆಸರು. ಮಹಾಚಮಸನ ಮಗ ಮಾಹಾಚಮಸ್ಯ.]

**ಭೂಃ ಇತಿ ವೈ**=ಭೂಃ ಎಂಬುದು **ಅಯಂ ಲೋಕಃ**=ಈ ಲೋಕ; **ಭುವಃ ಇತಿ**=ಭುವಃ ಎಂಬುದು **ಅಂತರಿಕ್ಷಂ**=ಅಂತರಿಕ್ಷ; **ಸುವಃ ಇತಿ**=ಸುವಃ ಎಂಬುದು **ಅಸೌ ಲೋಕಃ**=ಆ ಲೋಕ; **ಮಹಃ ಇತಿ**=ಮಹಃ ಎಂಬುದು **ಆದಿತ್ಯಃ**=ಆದಿತ್ಯ; **ಆದಿತ್ಯೇನ ವಾವ** = ಆದಿತ್ಯನಿಂದಲೇ **ಸರ್ವೇ ಲೋಕಾಃ** = ಎಲ್ಲ ಲೋಕಗಳು **ಮಹೀಯಂತೇ**=ವರ್ಧಿಸುತ್ತವೆ.

ಭೂಃ ಎಂಬುದೇ ಈ ಲೋಕ; ಭುವಃ ಎಂಬುದು ಅಂತರಿಕ್ಷ; ಸುವಃ ಎಂಬುದು ಆ ಲೋಕ; ಮಹಃ ಎಂಬುದು ಆದಿತ್ಯ; ಆದಿತ್ಯನಿಂದಲೇ ಅಲ್ಲವೆ ಎಲ್ಲ ಲೋಕಗಳು ವರ್ಧಿಸುವುವು?

**ಭೂಃ ಇತಿ ವೈ** = ಭೂಃ ಎಂಬುದು **ಅಗ್ನಿಃ** = ಅಗ್ನಿ; **ಭುವಃ ಇತಿ** = ಭುವಃ ಎಂಬುದು **ವಾಯುಃ** = ವಾಯು; **ಸುವಃ ಇತಿ** = ಸುವಃ ಎಂಬುದು **ಆದಿತ್ಯಃ** = ಆದಿತ್ಯ; **ಮಹಃ ಇತಿ** = ಮಹಃ ಎಂಬುದು **ಚಂದ್ರಮಾಃ** = ಚಂದ್ರ; **ಚಂದ್ರಮಸಾ ವಾವ**=ಚಂದ್ರನಿಂದಲೇ **ಸರ್ವಾಣಿ ಜ್ಯೋತೀಂಷಿ**=ಎಲ್ಲ ಜ್ಯೋತಿಗಳು **ಮಹೀಯಂತೇ**= ವರ್ಧಿಸುವುವು.

ಭೂಃ ಎಂಬುದೇ ಅಗ್ನಿ; ಭುವಃ ಎಂಬುದು ವಾಯು; ಸುವಃ ಎಂಬುದು ಆದಿತ್ಯ; ಮಹಃ ಎಂಬುದು ಚಂದ್ರ; ಚಂದ್ರನಿಂದಲೇ ಅಲ್ಲವೆ ಎಲ್ಲ ಜ್ಯೋತಿಗಳು ವರ್ಧಿಸುವುವು?

**ಭೂಃ ಇತಿ ವೈ** = ಭೂಃ ಎಂಬುದು **ಋಚಃ** = ಋಕ್ಕುಗಳು; **ಭುವಃ ಇತಿ** = ಭುವಃ ಎಂಬುದು **ಸಾಮಾನಿ** = ಸಾಮಗಳು; **ಸುವಃ ಇತಿ** = ಸುವಃ ಎಂಬುದು **ಯಜೂಂಷಿ**=ಯಜುಸ್ಸುಗಳು; **ಮಹಃ ಇತಿ** = ಮಹಃ ಎಂಬುದು **ಬ್ರಹ್ಮ** = ಬ್ರಹ್ಮ; **ಬ್ರಹ್ಮಣಾ ವಾವ** = ಬ್ರಹ್ಮದಿಂದಲೇ **ಸರ್ವೇ** = ಎಲ್ಲ **ವೇದಾಃ** = ವೇದಗಳು **ಮಹೀಯಂತೇ** = ವರ್ಧಿಸುವುವು.

ಭೂಃ ಎಂಬುದೇ ಋಕ್ಕುಗಳು; ಭುವಃ ಎಂಬುದು ಸಾಮಗಳು; ಸುವಃ ಎಂಬುದು ಯಜಸ್ಸುಗಳು; ಮಹಃ ಎಂಬುದು ಬ್ರಹ್ಮ;[೧] ಬ್ರಹ್ಮದಿಂದಲೇ ಅಲ್ಲವೆ ಎಲ್ಲ ವೇದಗಳು ವರ್ಧಿಸುವುವು?

[[೧] ಓಂಕಾರ.]

**ಭೂಃ ಇತಿ ವೈ** = ಭೂಃ ಎಂಬುದು **ಪ್ರಾಣಃ** = ಪ್ರಾಣ; **ಭುವಃ ಇತಿ** = ಭುವಃ ಎಂಬುದು **ಅಪಾನಃ** = ಅಪಾನ; **ಸುವಃ ಇತಿ** = ಸುವಃ ಎಂಬುದು **ವ್ಯಾನಃ** = ವ್ಯಾನ; **ಮಹಃ ಇತಿ** = ಮಹಃ ಎಂಬುದು **ಅನ್ನಂ** = ಅನ್ನ; **ಅನ್ನೇನ ವಾವ** = ಅನ್ನದಿಂದಲೇ **ಸರ್ವೇ** = ಎಲ್ಲ **ಪ್ರಾಣಾಃ** = ಪ್ರಾಣಗಳು **ಮಹೀಯಂತೇ** = ವರ್ಧಿಸುತ್ತವೆ.

ಭೂಃ ಎಂಬುದೇ ಪ್ರಾಣ; ಭುವಃ ಎಂಬುದು ಅಪಾನ; ಸುವಃ ಎಂಬುದು ವ್ಯಾನ; ಮಹಃ ಎಂಬುದು ಅನ್ನ; ಅನ್ನದಿಂದಲೇ ಅಲ್ಲವೆ ಎಲ್ಲ ಪ್ರಾಣಗಳು ವರ್ಧಿಸುವುವು?

**ತಾಃ ವೈ ಏತಾಃ**=ಆ ಈ **ಚತಸ್ರಃ**=ನಾಲ್ಕು **ವ್ಯಾಹೃತಯಃ**=ವ್ಯಾಹೃತಿಗಳು **ಚತಸ್ರಃ ಚತಸ್ರಃ**=ನಾಲ್ಕು ನಾಲ್ಕು ಭಾಗಗಳಾಗಿ **ಚತುರ್ಧಾ [ಭವಂತಿ]**=ನಾಲ್ಕು ಬಗೆಯಾಗಿರುತ್ತವೆ. **ಯಃ**=ಯಾವನು **ತಾಃ**=ಅವುಗಳನ್ನು **ವೇದ**=ಅರಿಯುವನೊ **ಸಃ**=ಅವನು **ಬ್ರಹ್ಮ**=ಬ್ರಹ್ಮವನ್ನು **ವೇದ**=ಅರಿತಿರುವನು. **ಸರ್ವೇ**=ಎಲ್ಲ **ದೇವಾಃ**=ದೇವತೆಗಳು **ಅಸ್ಮೈ**=ಇವನಿಗೆ **ಬಲಿಂ**=ಕಾಣಿಕೆಯನ್ನು **ಆವಹಂತಿ**=ತರುತ್ತಾರೆ.

ಆ ಈ ವ್ಯಾಹೃತಿಗಳು ನಾಲ್ಕು ನಾಲ್ಕು ಭಾಗಗಳಾಗಿ ನಾಲ್ಕು ಬಗೆಯಾಗಿರುತ್ತವೆ. ಯಾವನು ಅವುಗಳನ್ನು ಅರಿಯುತ್ತಾನೆಯೊ ಅವನು ಬ್ರಹ್ಮವನ್ನು ಅರಿತಿರುವನು. ಎಲ್ಲ ದೇವತೆಗಳೂ ಇವನಿಗೆ ಕಾಣಿಕೆಯನ್ನು ತರುತ್ತಾರೆ.

## ಆರನೆಯ ಅನುವಾಕ

ಸ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸಸ್ಪತಿಮ್ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ । ಏತತ್ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮಪ್ರಾಣಾರಾಮಂ ಮನ ಆನಂದಮ್ । ಶಾಂತಿಸಮೃದ್ಧಮಮೃತಮ್ । ಇತಿ ಪ್ರಾಚೀನಯೋಗ್ಯೋಪಾಸ್ವ ॥ ಇತಿ ಷಷ್ಠೋಽನುವಾಕಃ ॥

ಅಂತರ್ಹೃದಯೇ = ಹೃದಯದಲ್ಲಿ ಯಃ ಏಷಃ = ಯಾವ ಈ ಆಕಾಶಃ = ಆಕಾಶವಿದೆಯೋ ತಸ್ಮಿನ್ = ಅದರಲ್ಲಿ ಸಃ ಅಯಂ = ಆ ಈ ಮನೋಮಯಃ = ಮನೋಮಯನಾದ ಅಮೃತಃ = ಅಮೃತನಾದ ಹಿರಣ್ಮಯಃ = ಹಿರಣ್ಮಯನಾದ ಪುರುಷಃ = ಪುರುಷನು [ಇರುವನು]. [ಯಾ ಸುಷುಮ್ನಾ = ಯಾವ ಸುಷುಮ್ನಾ ನಾಡಿಯು] ತಾಲುಕೇ ಅಂತರೇಣ = ಎರಡು ತಾಲುಗಳ ಮಧ್ಯದಲ್ಲಿ ಯಃ ಏಷಃ = ಯಾವ ಈ [ಕಿರುನಾಲಗೆಯು] ಸ್ತನಃ ಇವ = ಸ್ತನದಂತೆ ಅವಲಂಬತೇ = ನೇತಾಡುತ್ತಿದೆಯೊ [ಅದರ ಮಧ್ಯದಲ್ಲಿ ಹೋಗಿ], ಯತ್ರ = ಎಲ್ಲಿ ಅಸೌ = ಈ ಕೇಶಾಂತಃ = ಕೇಶಗಳ ಮೂಲವು ವಿವರ್ತತೇ = ವಿಭಾಗವಾಗುತ್ತದೆಯೊ [ಅಲ್ಲಿ] ಶೀರ್ಷಕಪಾಲೇ = ಶೀರ್ಷಕಪಾಲಗಳನ್ನು ವ್ಯಪೋಹ್ಯ = ಒಡೆದುಕೊಂಡು [ವಿನಿರ್ಗತಾ = ಹೋಗಿರುವುದೊ] ಸಾ = ಅದು ಇಂದ್ರಯೋನಿಃ = ಬ್ರಹ್ಮಪ್ರಾಪ್ತಿಯ ಮಾರ್ಗ. [ಅದರ ಮೂಲಕ ಹೊರಗೆ ಬಂದು ಉಪಾಸಕನು] ಭೂಃ ಇತಿ ಅಗ್ನೌ = ಭೂಃ ಎಂಬ ಅಗ್ನಿಯಲ್ಲಿ, ಭುವಃ ಇತಿ ವಾಯೌ = ಭುವಃ ಎಂಬ ವಾಯುವಿನಲ್ಲಿ, ಸುವಃ ಇತಿ ಆದಿತ್ಯೇ = ಸುವಃ ಎಂಬ ಆದಿತ್ಯನಲ್ಲಿ, ಮಹಃ ಇತಿ ಬ್ರಹ್ಮಣಿ = ಮಹಃ ಎಂಬ

ಬ್ರಹ್ಮದಲ್ಲಿ **ಪ್ರತಿತಿಷ್ಠತಿ** = ನಿಲ್ಲುವನು. [ಬ್ರಹ್ಮಭೂತನಾಗಿ] **ಸ್ವಾರಾಜ್ಯಂ** = ಸ್ವಾರಾಜ್ಯವನ್ನು **ಆಪ್ನೋತಿ** = ಹೊಂದುತ್ತಾನೆ. **ಮನಸಸ್ಪತಿಂ** = ಮನಸ್ಸುಗಳ ಪತಿಯನ್ನು **ಆಪ್ನೋತಿ** = ಹೊಂದುತ್ತಾನೆ; **ವಾಕ್ಪತಿಃ** = ವಾಕ್ಪತಿಯೂ **ಶ್ರೋತ್ರಪತಿಃ** = ಶ್ರೋತ್ರಪತಿಯೂ **ವಿಜ್ಞಾನಪತಿಃ** = ವಿಜ್ಞಾನಪತಿಯೂ [ಆಗುವನು]. **ತತಃ** = ಅದಕ್ಕಿಂತಲೂ [ಅಧಿಕವಾದ] **ಏತತ್** = ಇದು **ಭವತಿ** = ಆಗುವನು. **ಆಕಾಶಶರೀರಂ** = ಆಕಾಶಶರೀರವಾದ **ಸತ್ಯಾತ್ಮಪ್ರಾಣಾರಾಮಂ** = ಸತ್ಯಾತ್ಮವೂ ಪ್ರಾಣಾರಾಮವೂ ಆದ **ಮನ ಆನಂದಂ** = ಮನ ಆನಂದವಾದ **ಶಾಂತಿಸಮೃದ್ಧಂ** = ಶಾಂತಿಸಮೃದ್ಧವಾದ **ಅಮೃತಂ** = ಅಮೃತವಾದ **ಬ್ರಹ್ಮ**=ಬ್ರಹ್ಮ. **ಪ್ರಾಚೀನಯೋಗ್ಯ** = ಎಲೈ ಪ್ರಾಚೀನಯೋಗ್ಯನೆ **ಇತಿ** = ಹೀಗೆ **ಉಪಾಸ್ಸ್ವ** = ಉಪಾಸಿಸು.

ಹೃದಯದ ಒಳಗೆ ಆಕಾಶವಿದೆ; ಅದರಲ್ಲಿ ಮನೋಮಯನೂ[೧] ಅಮೃತನೂ ಹಿರಣ್ಮಯನೂ[೨] ಆದ ಪುರುಷನಿರುವನು.[೩] ಎರಡು ತಾಲುಗಳ ನಡುವೆ ಸ್ತನದಂತೆ ನೇತಾಡುತ್ತಿರುವ ಕಿರುನಾಲಗೆಯ ಮಧ್ಯದಲ್ಲಿ (ಸುಷುಮ್ನಾನಾಡಿಯು ಹೋಗುವುದು); ಅದು ಕೇಶಗಳು ವಿಭಾಗವಾಗಿರುವ ಪ್ರದೇಶವನ್ನು[೪] ಸೇರಿ ಅಲ್ಲಿಂದ ಶೀರ್ಷಕಪಾಲಗಳನ್ನು ಭೇದಿಸಿಕೊಂಡು ಹೋಗಿರುತ್ತದೆ. ಅದೇ ಬ್ರಹ್ಮಪ್ರಾಪ್ತಿಯ ಮಾರ್ಗ. (ಉಪಾಸಕನು ಅದರ ಮೂಲಕ ಹೊರಗೆ ಬಂದು) ಭೂಃ ಎಂಬ ಅಗ್ನಿಯಲ್ಲಿಯೂ, ಭುವಃ ಎಂಬ ವಾಯುವಿನಲ್ಲಿಯೂ, ಸುವಃ ಎಂಬ ಆದಿತ್ಯನಲ್ಲಿಯೂ, ಮಹಃ ಎಂಬ ಬ್ರಹ್ಮದಲ್ಲಿಯೂ ನಿಲ್ಲುವನು. (ಬ್ರಹ್ಮಭೂತನಾಗಿ) ಸ್ವಾರಾಜ್ಯವನ್ನು[೫] ಹೊಂದುತ್ತಾನೆ; ಮನಸಸ್ಪತಿಯನ್ನು ಹೊಂದುತ್ತಾನೆ; ವಾಕ್ಪತಿಯೂ ಶ್ರೋತ್ರಪತಿಯೂ ವಿಜ್ಞಾನಪತಿಯೂ (ಆಗುವನು).[೬] ಅದಕ್ಕಿಂತಲೂ ಅಧಿಕವಾದ ಇದೂ ಆಗುವನು—ಆಕಾಶಶರೀರವೂ[೭] ಸತ್ಯಾತ್ಮವೂ[೮] ಪ್ರಾಣಾರಾಮವೂ[೯] ಮನ ಆನಂದವೂ[೧೦] ಶಾಂತಿಸಮೃದ್ಧವೂ[೧೧] ಅಮೃತವೂ ಆದ ಬ್ರಹ್ಮ. ಎಲೈ ಪ್ರಾಚೀನಯೋಗ್ಯ, ಹೀಗೆ ಉಪಾಸಿಸು.

[ಬ್ರಹ್ಮವನ್ನು ಉಪಾಸನೆಮಾಡುವುದಕ್ಕೆ ಮತ್ತು ಸಾಕ್ಷಾತ್ಕರಿಸುವುದಕ್ಕೆ ಹೃದಯಾಕಾಶವೆಂಬ ಸ್ಥಾನವನ್ನು ಇಲ್ಲಿ ಹೇಳಿದೆ.

[೧] ವಿಜ್ಞಾನಮಯನು; ವಿಜ್ಞಾನದ ಮೂಲಕ ಲಭ್ಯನು.

[೨] ಜ್ಯೋತಿರ್ಮಯನು.

[೩] ಪುರದಲ್ಲಿ ಇರುವುದರಿಂದ ಅಥವಾ ಭೂರಾದಿಲೋಕಗಳನ್ನು ಪೂರ್ಣಗೊಳಿಸುವುದರಿಂದ.

[೪] ಮೂರ್ಧಪ್ರದೇಶ.

[೫] ಸ್ವರಾಡ್ರೂಪವನ್ನು.

೬ ಬ್ರಹ್ಮವು ಸರ್ವಾತ್ಮಕವಾಗಿರುವುದರಿಂದ.

೭ ಆಕಾಶವೇ ಇದರ ಶರೀರ. ಅಥವಾ ಆಕಾಶದಂತೆ ಇದರ ಶರೀರ ಸೂಕ್ಷ್ಮ ವಾಗಿರುವುದು.

೮ ಸತ್ಯವೇ ಇದರ ಸ್ವಭಾವ.

೯ ಪ್ರಾಣಗಳಲ್ಲಿ ಕ್ರೀಡೆ ಯಾವುದಕ್ಕೆ ಇರುವುದೊ ಅದು.

೧೦ ಸುಖವನ್ನುಂಟುಮಾಡುವ ಮನಸ್ಸು ಯಾವುದಕ್ಕೆ ಇರುವುದೊ ಅದು ಮನ ಆನಂದ.

೧೧ ಶಾಂತಿಯೂ ಸಮೃದ್ಧವೂ ಆಗಿರುವುದು ಶಾಂತಿಸಮೃದ್ಧ.]

## ಏಳನೆಯ ಅನುವಾಕ

ಪೃಥಿವ್ಯಂತರಿಕ್ಷಂ ದ್ಯೌರ್ದಿಶೋಽವಾಂತರದಿಶಾಃ ಅಗ್ನಿರ್ವಾಯುರಾದಿತ್ಯಶ್ಚಂದ್ರಮಾ ನಕ್ಷತ್ರಾಣಿ । ಆಪ ಓಷಧಯೋ ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಮ್ । ಅಥಾಧ್ಯಾತ್ಮಮ್ । ಪ್ರಾಣೋ ವ್ಯಾನೋಽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ತ್ವಕ್ । ಚರ್ಮ ಮಾಗ್ಂಸಗ್ಂ ಸ್ನಾವಾಸ್ಥಿ ಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಂಕ್ತಂ ವಾ ಇದಗ್ಂ ಸರ್ವಮ್ । ಪಾಂಕ್ತೇನೈವ ಪಾಂಕ್ತಗ್ಂ ಸ್ಪೃಣೋತೀತಿ ॥ ಇತಿ ಸಪ್ತಮೋಽನುವಾಕಃ ॥

ಪೃಥಿವೀ = ಪೃಥ್ವೀ ಅಂತರಿಕ್ಷಂ = ಅಂತರಿಕ್ಷ ದ್ಯೌಃ = ದ್ಯುಲೋಕ ದಿಶಃ = ದಿಕ್ಕುಗಳು ಅವಾಂತರದಿಶಾಃ = ಅವಾಂತರ ದಿಕ್ಕುಗಳು; ಅಗ್ನಿಃ = ಅಗ್ನಿ ವಾಯುಃ = ವಾಯು ಆದಿತ್ಯಃ = ಆದಿತ್ಯ ಚಂದ್ರಮಾಃ = ಚಂದ್ರ ನಕ್ಷತ್ರಾಣಿ = ನಕ್ಷತ್ರಗಳು; ಆಪಃ = ನೀರು ಓಷಧಯಃ = ಓಷಧಿಗಳು ವನಸ್ಪತಯಃ = ಮರಗಳು ಆಕಾಶಃ = ಅಕಾಶ ಆತ್ಮಾ = ಆತ್ಮ; ಇತಿ ಅಧಿಭೂತಂ = ಹೀಗೆ ಅಧಿಭೂತ.

ಪೃಥ್ವೀ, ಅಂತರಿಕ್ಷ, ದ್ಯುಲೋಕ, ದಿಕ್ಕುಗಳು, ಅವಾಂತರ ದಿಕ್ಕುಗಳು–(ಇವು ಲೋಕಪಾಂಕ್ತ). ಅಗ್ನಿ, ವಾಯು, ಆದಿತ್ಯ, ಚಂದ್ರ, ನಕ್ಷತ್ರಗಳು–(ಇವು ದೇವತಾಪಾಂಕ್ತ). ನೀರು, ಓಷಧಿಗಳು, ಮರಗಳು, ಆಕಾಶ, ಆತ್ಮ[೧]–(ಇವು ಭೂತಪಾಂಕ್ತ). ಇದು ಅಧಿಭೂತ.

[ಹಿಂದೆ ಹೇಳಿದ ವ್ಯಾಹೃತ್ಯಾತ್ಮವಾದ ಬ್ರಹ್ಮವನ್ನೇ ಪೃಥಿವ್ಯಾದಿ ಪಾಂಕ್ತಸ್ವರೂಪದಿಂದ ಉಪಾಸನೆಮಾಡಬೇಕೆಂದು ಇಲ್ಲಿ ಹೇಳಿದೆ. ಐದು ಪಾದಗಳಿರುವ ಒಂದು ವೈದಿಕ ಛಂದಸ್ಸಿಗೆ ಪಂಕ್ತಿಯೆಂದು ಹೆಸರು. ಪಂಚಸಂಖ್ಯಾಕಲ್ಪನೆಯಿಂದ ಎಲ್ಲವನ್ನೂ ಪಂಕ್ತಿಛಂದಸ್ಸೆಂದು ತಿಳಿಯಬಹುದು. ಪತ್ನಿ ಯಜಮಾನ ಪುತ್ರ ದೈವವಿತ್ತ ಮತ್ತು ಮಾನುಷವಿತ್ತ ಎಂಬ ಐದರಿಂದ ಮಾಡಲ್ಪಡುವ ಯಜ್ಞವೂ ಪಾಂಕ್ತವೇ. ಲೋಕದಿಂದ ಹಿಡಿದು ಆತ್ಮನ ವರೆಗೆ ಎಲ್ಲವೂ ಪಾಂಕ್ತವೆಂದು ಕಲ್ಪಿಸಿದರೆ ಎಲ್ಲವೂ ಯಜ್ಞವೇ ಆಗುತ್ತದೆ. ಈ ತರಹ ಯಜ್ಞಕಲ್ಪನೆಯಿಂದ ಸಾಧಕನು ಪಾಂಕ್ತಸ್ವರೂಪನಾದ ಹಿರಣ್ಯಗರ್ಭನ ಸ್ವರೂಪವನ್ನು ಹೊಂದುತ್ತಾನೆ.

[೧] ವಿರಾಟ್ ಪುರುಷ.]

**ಅಥ ಅಧ್ಯಾತ್ಮಂ** = ಇನ್ನು ಅಧ್ಯಾತ್ಮ. **ಪ್ರಾಣಃ**=ಪ್ರಾಣ **ವ್ಯಾನಃ** = ವ್ಯಾನ **ಅಪಾನಃ** = ಅಪಾನ **ಉದಾನಃ** = ಉದಾನ **ಸಮಾನಃ** = ಸಮಾನ; **ಚಕ್ಷುಃ** = ಚಕ್ಷು **ಶ್ರೋತ್ರಂ** = ಶ್ರೋತ್ರ **ಮನಃ** = ಮನಸ್ಸು **ವಾಕ್** = ವಾಕ್ಕು **ತ್ವಕ್** = ತ್ವಕ್ಕು; **ಚರ್ಮ** = ಚರ್ಮ **ಮಾಂಸಂ** = ಮಾಂಸ **ಸ್ನಾವಾ** = ಸ್ನಾಯು **ಅಸ್ಥಿ**=ಅಸ್ಥಿ **ಮಜ್ಜಾ** = ಕೊಬ್ಬು. **ಋಷಿಃ** = ಋಷಿಯು **ಏತತ್** = ಇದನ್ನು **ಅಧಿವಿಧಾಯ** = ಪರಿಕಲ್ಪಿಸಿ **ಅವೋಚತ್** = ಹೇಳಿದನು— **ಇದಂ ಸರ್ವಂ** = ಇದೆಲ್ಲವೂ **ಪಾಂಕ್ತಂ ವೈ**=ಪಾಂಕ್ತವೇ; **ಪಾಂಕ್ತೇನ ಏವ** = ಪಾಂಕ್ತದಿಂದಲೇ **ಪಾಂಕ್ತಂ** = ಪಾಂಕ್ತವನ್ನು **ಸ್ಪೃಣೋತಿ** = ಪೂರ್ಣಗೊಳಿಸುತ್ತಾನೆ **ಇತಿ** = ಎಂದು.

ಇನ್ನು ಅಧ್ಯಾತ್ಮ—ಪ್ರಾಣ, ವ್ಯಾನ, ಅಪಾನ, ಉದಾನ, ಸಮಾನ–(ಇವು ವಾಯುಪಾಂಕ್ತ). ಚಕ್ಷು, ಶ್ರೋತ್ರ, ಮನಸ್ಸು, ವಾಕ್ಕು, ತ್ವಕ್ಕು–(ಇವು ಇಂದ್ರಿಯಪಾಂಕ್ತ). ಚರ್ಮ, ಮಾಂಸ, ಸ್ನಾಯು, ಅಸ್ಥಿ, ಕೊಬ್ಬು–(ಇವು ಧಾತುಪಾಂಕ್ತ). ಈ ರೀತಿ ಪಾಂಕ್ತೋಪಾಸನೆಯನ್ನು ಪರಿಕಲ್ಪಿಸಿ ಋಷಿಯು ಹೇಳಿದನು: 'ಇದೆಲ್ಲವೂ ಪಾಂಕ್ತವೇ; ಪಾಂಕ್ತದಿಂದಲೇ ಪಾಂಕ್ತವನ್ನು ಪೂರ್ಣಗೊಳಿಸುತ್ತಾನೆ.[೧]'

[[೧] ಅಧ್ಯಾತ್ಮ ಮತ್ತು ಬಾಹ್ಯ–ಈ ಎರಡು ಒಂದೇ ಎಂದು ಕಾಣುತ್ತಾನೆ.]

# ಎಂಟನೆಯ ಅನುವಾಕ

ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಮ್ । ಓಮಿತ್ಯೇತ-ದನುಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯಂತಿ । ಓಮಿತಿ ಸಾಮಾನಿ ಗಾಯಂತಿ । ಓಗ್ಂ ಶೋಮಿತಿ ಶಸ್ತ್ರಾಣಿ ಶಗ್ಂಸಂತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ ಓಮಿತ್ಯಗ್ನಿಹೋತ್ರಮನುಜಾನಾತಿ । ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯ-ನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈವೋಪಾಪ್ನೋತಿ ॥ ಇತಿ ಅಷ್ಟಮೋಽನುವಾಕಃ ॥

ಓಂ ಇತಿ ಬ್ರಹ್ಮ = ಓಂ ಎಂಬುದು ಬ್ರಹ್ಮ. ಓಂ ಇತಿ = ಓಂ ಎಂಬುದು ಇದಂ ಸರ್ವಂ = ಇದೆಲ್ಲವೂ. ಓಂ ಇತಿ ಏತತ್ = ಓಂ ಎಂಬುದು ಹ ಸ್ಮ ವೈ ಅನುಕೃತಿಃ = ಅನುಕರಣ. [ಅಧ್ವರ್ಯುವು ಅಗ್ನೀಧ್ರನನ್ನು ಕುರಿತು] ಅಪಿ = ಮತ್ತು ಓಂ = ಓಂ ಶ್ರಾವಯ = ದೇವತೆಗಳಿಗೆ ಹವಿಸ್ಸನ್ನು ಕೊಡುವ ಕಾಲವು ಸಮೀಪಿಸಿತೆಂದು ತಿಳಿಸು ಇತಿ = ಎಂದು ಆಶ್ರಾವಯಂತಿ = ಕೇಳುವಂತೆ ಮಾಡುತ್ತಾರೆ. ಓಂ ಇತಿ = ಓಂ ಎಂದು ಸಾಮಾನಿ = ಸಾಮಗಳನ್ನು ಗಾಯಂತಿ = ಹಾಡುತ್ತಾರೆ. ಓಂ ಶೋಂ ಇತಿ = ಓಂ ಶೋಂ ಎಂದು ಶಸ್ತ್ರಾಣಿ = ಶಸ್ತ್ರಗಳನ್ನು ಶಂಸಂತಿ = ಪಠಿಸುತ್ತಾರೆ. ಓಂ ಇತಿ = ಓಂ ಎಂದು ಅಧ್ವರ್ಯುಃ = ಅಧ್ವರ್ಯುವು ಪ್ರತಿಗರಂ = ಪ್ರೋತ್ಸಾಹವಾಕ್ಯವನ್ನು ಪ್ರತಿಗೃಣಾತಿ = ಹೇಳುತ್ತಾನೆ. ಓಂ ಇತಿ = ಓಂ ಎಂದು ಬ್ರಹ್ಮಾ = ಬ್ರಹ್ಮನು ಪ್ರಸೌತಿ = ಅನುಮತಿಯನ್ನು ಕೊಡುತ್ತಾನೆ. ಓಂ ಇತಿ = ಓಂ ಎಂದು [ಯಜಮಾನಃ = ಯಜಮಾನನು] ಅಗ್ನಿಹೋತ್ರಂ = ಅಗ್ನಿಹೋತ್ರಕ್ಕೆ ಅನುಜಾನಾತಿ = ಆಜ್ಞಾಪಿಸುತ್ತಾನೆ. ಬ್ರಾಹ್ಮಣಃ = ಬ್ರಾಹ್ಮಣನು ಬ್ರಹ್ಮ = ವೇದವನ್ನು ಉಪಾಪ್ನವಾನಿ = ಹೊಂದುವಂತಾಗಲಿ ಇತಿ = ಎಂದು ಪ್ರವಕ್ಷ್ಯನ್ = ಪ್ರವಚನಮಾಡುವವನಾಗಿ ಓಂ ಇತಿ = ಓಂ ಎಂದು ಆಹ = ಹೇಳುತ್ತಾನೆ. ಬ್ರಹ್ಮ = ಬ್ರಹ್ಮವನ್ನು ಉಪಾಪ್ನೋತಿ ಏವ = ಹೊಂದುತ್ತಾನೆ.

ಓಂ ಎಂಬುದು ಬ್ರಹ್ಮ.[೧] ಇದೆಲ್ಲವೂ ಓಂ ಎಂಬುದು. ಓಂ ಎಂಬುದು ಅನುಕರಣ.[೨] (ಅಧ್ವರ್ಯುವು ಅಗ್ನೀಧ್ರನನ್ನು ಕುರಿತು)[೩] 'ಓಂ, ದೇವತೆಗಳಿಗೆ ಹವಿಸ್ಸನ್ನು ಕೊಡುವ ಕಾಲವು ಸಮೀಪಿಸಿತೆಂದು ತಿಳಿಸು' ಎಂದು ಹೇಳುತ್ತಾನೆ. ಓಂ ಎಂದು ಸಾಮಗಳನ್ನು ಹಾಡುತ್ತಾರೆ. ಓಂ ಶೋಂ

ಎಂದು (ಹೋತೃಗಳು) ಶಸ್ತ್ರಗಳನ್ನು ಪಠಿಸುತ್ತಾರೆ.[೪] ಓಂ ಎಂದು ಅಧ್ವರ್ಯುವು ಪ್ರೋತ್ಸಾಹವಾಕ್ಯವನ್ನು[೫] ಹೇಳುತ್ತಾನೆ. ಓಂ ಎಂದು ಬ್ರಹ್ಮನು ಅನುಮತಿಯನ್ನು ಕೊಡುತ್ತಾನೆ. (ಯಜಮಾನನು) ಓಂ ಎಂದು ಅಗ್ನಿಹೋತ್ರಕ್ಕೆ ಆಜ್ಞಾಪಿಸುತ್ತಾನೆ. 'ವೇದವನ್ನು ನಾನು ಹೊಂದುವಂತಾಗಲಿ' ಎಂದು ಪ್ರವಚನಮಾಡುವವನಾಗಿ ಬ್ರಾಹ್ಮಣನು ಓಂ ಎಂದು ಹೇಳುತ್ತಾನೆ. ಅವನು ಬ್ರಹ್ಮವನ್ನು ಹೊಂದುತ್ತಾನೆ.[೬]

[ಈಗ ಸರ್ವೋಪಾಸನೆಗೂ ಅಂಗವಾಗಿರುವ ಓಂಕಾರದ ಉಪಾಸನೆಯನ್ನು ವಿಧಿಸಿದೆ. ಪರಾಪರಬ್ರಹ್ಮದೃಷ್ಟಿಯಿಂದ ಓಂಕಾರವನ್ನು ಉಪಾಸನೆಮಾಡಿದರೆ ಅದು ಶಬ್ದಮಾತ್ರವಾಗಿದ್ದರೂ ಪರಾಪರಬ್ರಹ್ಮಪ್ರಾಪ್ತಿಗೆ ಸಾಧನವಾಗುತ್ತದೆ.

[೧] ಓಂ ಎಂಬ ಶಬ್ದರೂಪವು ಬ್ರಹ್ಮ ಎಂದು ಉಪಾಸನೆಮಾಡಬೇಕು.

[೨] ಒಬ್ಬರು ಹೇಳಿದ್ದನ್ನು 'ಮಾಡುತ್ತೇನೆ' ಎಂದು ಅನುಕರಿಸುವುದು.

[೩] ದರ್ಶಪೂರ್ಣಮಾಸವೇ ಮೊದಲಾದ ಯಾಗಗಳಲ್ಲಿ.

[೪] ಹೋತೃವು ಶಸ್ತ್ರಗಳನ್ನು ಹೇಳುವಾಗ 'ಶೋಂಸಾವೋಂ' ಎಂದು ಅಧ್ವರ್ಯುವಿನ ಅನುಜ್ಞೆಯನ್ನು ಬೇಡುತ್ತಾನೆ.

[೫] 'ನಮಗೆ ಶಸ್ತ್ರವನ್ನು ಕೇಳಿ ಸಂತೋಷವಾಯಿತು' ಎಂದು ಅಧ್ವರ್ಯುವು ಹೇಳುವ ಉತ್ಸಾಹವಾಣಿ.

[೬] ಓಂಕಾರಪೂರ್ವಕವಾಗಿ ಪ್ರಾರಂಭಿಸಿದ ಕ್ರಿಯೆಗಳೆಲ್ಲವೂ ಸಫಲವಾಗಲು ಓಂಕಾರವನ್ನು ಬ್ರಹ್ಮವೆಂದು ಉಪಾಸಿಸಬೇಕು ಎಂದು ವಾಕ್ಯಾರ್ಥ. ಯಜ್ಞದಾನತಪಃ ಕ್ರಿಯೆಗಳನ್ನು ಓಂ ಎಂದು ಉಚ್ಚರಿಸಿ ಪ್ರಾರಂಭಿಸಬೇಕೆಂದು ಗೀತೆಯು (೧೭, ೨೪) ಹೇಳುತ್ತದೆ.]

# ಒಂಬತ್ತನೆಯ ಅನುವಾಕ

ಋತಂ ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಂ ಚ ಸ್ವಾಧ್ಯಾಯಪ್ರವಚನೇ ಚ । ತಪಶ್ಚ ಸ್ವಾಧ್ಯಾಯಪ್ರವಚನೇ ಚ । ದಮಶ್ಚ ಸ್ವಾಧ್ಯಾಯಪ್ರವಚನೇ ಚ । ಶಮಶ್ಚ ಸ್ವಾಧ್ಯಾಯಪ್ರವಚನೇ ಚ । ಅಗ್ನಯಶ್ಚ ಸ್ವಾಧ್ಯಾಯಪ್ರವಚನೇ ಚ । ಅಗ್ನಿಹೋತ್ರಂ ಚ ಸ್ವಾಧ್ಯಾಯಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯಪ್ರವಚನೇ ಚ । ಮಾನುಷಂ ಚ ಸ್ವಾಧ್ಯಾಯಪ್ರವಚನೇ ಚ । ಪ್ರಜಾ ಚ ಸ್ವಾಧ್ಯಾಯಪ್ರವಚನೇ ಚ । ಪ್ರಜನಶ್ಚ ಸ್ವಾಧ್ಯಾಯಪ್ರವಚನೇ ಚ । ಪ್ರಜಾತಿಶ್ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಮಿತಿ ಸತ್ಯವಚಾ ರಾಥೀತರಃ । ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ । ತದ್ಧಿ ತಪಸ್ತದ್ಧಿ ತಪಃ ॥ ಇತಿ ನವಮೋಽನುವಾಕಃ ॥

ಋತಂ ಚ = ಋತ, ಸ್ವಾಧ್ಯಾಯಪ್ರವಚನೇ ಚ = ಮತ್ತು ಸ್ವಾಧ್ಯಾಯ ಪ್ರವಚನಗಳು; ಸತ್ಯಂ ಚ=ಸತ್ಯ, ಸ್ವಾಧ್ಯಾಯಪ್ರವಚನೇ ಚ; ತಪಃ ಚ=ತಪಸ್ಸು, ಸ್ವಾಧ್ಯಾಯಪ್ರವಚನೇ ಚ; ದಮಃ ಚ=ದಮ, ಸ್ವಾಧ್ಯಾಯಪ್ರವಚನೇ ಚ; ಶಮಃ ಚ = ಶಮ, ಸ್ವಾಧ್ಯಾಯಪ್ರವಚನೇ ಚ; ಅಗ್ನಯಃ ಚ = ಅಗ್ನಿಗಳು, ಸ್ವಾಧ್ಯಾಯಪ್ರವಚನೇ ಚ; ಅಗ್ನಿಹೋತ್ರಂ ಚ = ಅಗ್ನಿಹೋತ್ರ, ಸ್ವಾಧ್ಯಾಯಪ್ರವಚನೇ ಚ; ಅತಿಥಯಃ ಚ=ಅತಿಥಿಗಳು, ಸ್ವಾಧ್ಯಾಯಪ್ರವಚನೇ ಚ; ಮಾನುಷಂ ಚ=ಮಾನುಷ, ಸ್ವಾಧ್ಯಾಯಪ್ರವಚನೇ ಚ; ಪ್ರಜಾ ಚ = ಪ್ರಜೆ, ಸ್ವಾಧ್ಯಾಯಪ್ರವಚನೇ ಚ; ಪ್ರಜನಃ ಚ = ಪ್ರಜನ, ಸ್ವಾಧ್ಯಾಯಪ್ರವಚನೇ ಚ; ಪ್ರಜಾತಿಃ ಚ = ಪ್ರಜಾತಿ, ಸ್ವಾಧ್ಯಾಯಪ್ರವಚನೇ ಚ; ಸತ್ಯವಚಾಃ ರಾಥೀತರಃ = ಸತ್ಯವಂತನಾದ ರಾಥೀತರನು ಸತ್ಯಂ [ಏವ] = ಸತ್ಯವೇ [ಅನುಷ್ಠೇಯಂ = ಅನುಷ್ಠೇಯವು] ಇತಿ = ಎಂದು [ಮನ್ಯತೇ=ಅಭಿಪ್ರಾಯಪಡುತ್ತಾನೆ]. ತಪೋನಿತ್ಯಃ ಪೌರುಶಿಷ್ಟಿಃ=ತಪೋನಿತ್ಯನಾದ ಪೌರುಶಿಷ್ಟಿಯು ತಪಃ ಇತಿ [ಮನ್ಯತೇ]= ತಪಸ್ಸು ಎಂದು [ಅಭಿಪ್ರಾಯಪಡುತ್ತಾನೆ]. ಮೌದ್ಗಲ್ಯಃ ನಾಕಃ = ಮುದ್ಗಲಪುತ್ರನಾದ ನಾಕನು ಸ್ವಾಧ್ಯಾಯಪ್ರವಚನೇ ಏವ =

ಸ್ವಾಧ್ಯಾಯಪ್ರವಚನಗಳೇ [ಅನುಷ್ಠೇಯೇ] ಇತಿ=ಅನುಷ್ಠೇಯವೆಂದು [ಮನ್ಯತೇ=ಅಭಿಪ್ರಾಯಪಡುತ್ತಾನೆ]. ತತ್ ಹಿ ತಪಃ = ಅದೇ ತಪಸ್ಸು, ತತ್ ಹಿ ತಪಃ.

ಋತ[೧] ಮತ್ತು ಸ್ವಾಧ್ಯಾಯಪ್ರವಚನಗಳು;[೨] ಸತ್ಯ[೩] ಮತ್ತು ಸ್ವಾಧ್ಯಾಯ ಪ್ರವಚನಗಳು; ತಪಸ್ಸು[೪] ಮತ್ತು ಸ್ವಾಧ್ಯಾಯಪ್ರವಚನಗಳು; ದಮ[೫] ಮತ್ತು ಸ್ವಾಧ್ಯಾಯಪ್ರವಚನಗಳು; ಶಮ[೬] ಮತ್ತು ಸ್ವಾಧ್ಯಾಯಪ್ರವಚನಗಳು; ಅಗ್ನಿಗಳು[೭] ಮತ್ತು ಸ್ವಾಧ್ಯಾಯಪ್ರವಚನಗಳು; ಅಗ್ನಿಹೋತ್ರ[೮] ಮತ್ತು ಸ್ವಾಧ್ಯಾಯಪ್ರವಚನಗಳು; ಅತಿಥಿಗಳು[೯] ಮತ್ತು ಸ್ವಾಧ್ಯಾಯಪ್ರವಚನಗಳು; ಮಾನುಷ[೧೦] ಮತ್ತು ಸ್ವಾಧ್ಯಾಯಪ್ರವಚನಗಳು; ಪ್ರಜೆ[೧೧] ಮತ್ತು ಸ್ವಾಧ್ಯಾಯ ಪ್ರವಚನಗಳು; ಪ್ರಜನ[೧೨] ಮತ್ತು ಸ್ವಾಧ್ಯಾಯಪ್ರವಚನಗಳು; ಪ್ರಜಾತಿ[೧೩] ಮತ್ತು ಸ್ವಾಧ್ಯಾಯಪ್ರವಚನಗಳು–(ಇವುಗಳನ್ನು ಅನುಷ್ಠಾನಮಾಡಬೇಕು). ಸತ್ಯವನ್ನೇ ಅನುಷ್ಠಾನಮಾಡಬೇಕೆಂದು ಸತ್ಯವಂತನಾದ ರಾಥೀತರನ[೧೪] ಅಭಿಪ್ರಾಯ. ತಪಸ್ಸನ್ನೇ ಅನಷ್ಠಾನಮಾಡಬೇಕೆಂದು ತಪೋನಿತ್ಯನಾದ[೧೫] ಪೌರುಶಿಷ್ಟಿಯ[೧೬] ಅಭಿಪ್ರಾಯ. ಸ್ವಾಧ್ಯಾಯಪ್ರವಚನಗಳನ್ನೇ ಅನುಷ್ಠಿಸ ಬೇಕೆಂದು ಮುದ್ಗಲನ ಮಗನಾದ ನಾಕನ ಅಭಿಪ್ರಾಯ. ಅದೇ ತಪಸ್ಸು, ಅದೇ ತಪಸ್ಸು.[೧೭]

[ವಿಜ್ಞಾನದಿಂದಲೇ ಸ್ವಾರಾಜ್ಯವನ್ನು ಪಡೆಯುತ್ತಾನೆ— ಎಂದು ಹಿಂದೆ ಹೇಳಿದ್ದರ ಆಧಾರದ ಮೇಲೆ ಶ್ರೌತಸ್ಮಾರ್ತಕರ್ಮಗಳು ವ್ಯರ್ಥವೆಂದು ಭಾವಿಸಬಹುದು. ಅಂತಹ ಭಾವನೆಯನ್ನು ಹೋಗಲಾಡಿಸಿ ಕರ್ಮಗಳು ಪುರುಷಾರ್ಥಕ್ಕೆ ಸಾಧನವೆಂದು ಪ್ರದರ್ಶಿಸಲು ಈ ಉಪನ್ಯಾಸವು ಬಂದಿದೆ.

[೧] ಮೊದಲನೆಯ ಅನುವಾಕದ ೧೦ನೆಯ ಟಿಪ್ಪಣಿಯನ್ನು ನೋಡಿ.

[೨] ಸ್ವಾಧ್ಯಾಯ ಎಂದರೆ ವೇದವನ್ನು ಕಲಿಯುವುದು; 'ಪ್ರವಚನ' ಎಂದರೆ ವೇದವನ್ನು ಕಲಿಸುವುದು. ಕರ್ಮಗಳನ್ನು ಅನುಷ್ಠಿಸುತ್ತಿರುವಾಗ ಸ್ವಾಧ್ಯಾಯ ಪ್ರವಚನಗಳನ್ನು ಯತ್ನಪೂರ್ವಕವಾಗಿ ಮಾಡಬೇಕೆಂಬುದನ್ನು ತಿಳಿಸಲು ಪ್ರತಿಯೊಂದರ ಜೊತೆಗೂ 'ಸ್ವಾಧ್ಯಾಯ, ಪ್ರವಚನ' ಎಂದು ಪುನಃ ಪುನಃ ಸೇರಿಸಿಕೊಂಡು ಹೇಳಿರುತ್ತದೆ. ಏಕೆಂದರೆ ಅರ್ಥಜ್ಞಾನವು ಅಧ್ಯಯನವನ್ನು ಅವಲಂಬಿಸಿಕೊಂಡಿರುತ್ತದೆ. ಅರ್ಥಜ್ಞಾನವನ್ನು ಪರಮಶ್ರೇಯಸ್ಸು ಅವಲಂಬಿಸಿಕೊಂಡಿರುತ್ತದೆ. ವೇದವನ್ನು ಮರೆಯದಿರುವುದಕ್ಕೆ ಮತ್ತು ಧರ್ಮಪ್ರವೃದ್ಧಿಗೆ ಪ್ರವಚನವನ್ನು ಮಾಡಬೇಕು.

[೩] ಸತ್ಯವಚನ.

[೪] ಕೃಚ್ಛ್ರವೇ ಮೊದಲಾದುವು.

[೫] ಬಾಹ್ಯಕರಣಗಳ ಉಪಶಮ.

[೬] ಅಂತಃಕರಣದ ಉಪಶಮ.

೭ ಅಗ್ನಿಗಳನ್ನು ಆಧಾನಮಾಡಬೇಕು.
೮ ಅಗ್ನಿಹೋತ್ರವನ್ನು ಹೋಮಮಾಡಬೇಕು.
೯ ಅತಿಥಿಸತ್ಕಾರವನ್ನು ಮಾಡಬೇಕು.
೧೦ ಲೌಕಿಕವ್ಯವಹಾರವನ್ನು ಬಂದಂತೆ ಅನುಷ್ಠಿಸಬೇಕು.
೧೧ ಸಂತತಿಯನ್ನು ಪಡೆಯಬೇಕು.
೧೨ ಭಾರ್ಯಾಗಮನ.
೧೩ ಪೌತ್ರನನ್ನು ಪಡೆಯುವುದು.
೧೪ ರಥೀತರನ ಗೋತ್ರದವನು.
೧೫ ತಪಸ್ಸಿನಲ್ಲಿ ನಿತ್ಯವೂ ನಿರತನಾಗಿರುವವನು.
೧೬ ಪುರುಶಿಷ್ಟನ ಮಗ.
೧೭ ಸ್ವಾಧ್ಯಾಯಪ್ರವಚನಗಳೇ ತಪಸ್ಸು.]

## ಹತ್ತನೆಯ ಅನುವಾಕ

ಅಹಂ ವೃಕ್ಷಸ್ಯ ರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ । ಊರ್ಧ್ವಪವಿತ್ರೋ ವಾಜಿನೀವ ಸ್ವಮೃತಮಸ್ಮಿ । ದ್ರವಿಣಗ್‍ಂ ಸವರ್ಚಸವ್‌ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಂಕೋರ್ವೇದಾನುವಚನಮ್‌ ॥ ಇತಿ ದಶಮೋಽನುವಾಕಃ ॥

ಅಹಂ=ನಾನು ವೃಕ್ಷಸ್ಯ=ವೃಕ್ಷವನ್ನು ರೇರಿವಾ=ಪ್ರೇರಿಸುವವನು. [ಮಮ=ನನ್ನ] ಕೀರ್ತಿಃ=ಕೀರ್ತಿಯು ಗಿರೇಃ=ಪರ್ವತದ ಪೃಷ್ಠಂ ಇವ=ಶಿಖರದಂತೆ [ಉಚ್ಛ್ರಿತಾ=ಉನ್ನತವಾಗಿರುವುದು]. ಊರ್ಧ್ವಪವಿತ್ರಃ [ಊರ್ಧ್ವವೆಂದರೆ ಕಾರಣ, ಪವಿತ್ರವೆಂದರೆ ಜ್ಞಾನದಿಂದ ಪ್ರಕಾಶಿಸಲ್ಪಡುವ ಪರಬ್ರಹ್ಮ]=ಪರಬ್ರಹ್ಮವು ನನ್ನ ಕಾರಣ. ವಾಜಿನಿ=ಸೂರ್ಯನಲ್ಲಿ ಸ್ವಮೃತಂ ಇವ=ಆತ್ಮತತ್ತ್ವವು ಇರುವಂತೆ ಅಸ್ಮಿ=ಆತ್ಮಸ್ವರೂಪನಾಗಿರುವೆನು. ಸವರ್ಚಸಂ=ವರ್ಚಸ್ಸಿನಿಂದ ಕೂಡಿದ ದ್ರವಿಣಂ=ಧನವು, ಆತ್ಮತತ್ತ್ವವು ಅಸ್ಮಿ=ಆಗಿರುತ್ತೇನೆ. ಸುಮೇಧಾಃ=ಮೇಧಾಸಂಪನ್ನನಾಗಿರುತ್ತೇನೆ; ಅಮೃತೋಕ್ಷಿತಃ [ಅಮೃತಃ+ಅಕ್ಷಿತಃ ಅಥವಾ ಅಮೃತ+ಉಕ್ಷಿತಃ]=ಅಮೃತಸ್ವರೂಪನು ಮತ್ತು ಅವ್ಯಯನು ಅಥವಾ ಅಮೃತದಿಂದ ಚಿಮುಕಿಸಲ್ಪಟ್ಟವನು. ಇತಿ=ಹೀಗೆ ತ್ರಿಶಂಕೋಃ=ತ್ರಿಶಂಕುವಿನ ವೇದಾನುವಚನಂ=ವೇದಾನುವಚನ.

ನಾನು ವೃಕ್ಷವನ್ನು ಪ್ರೇರಿಸುವವನು.[೧] ನನ್ನ ಕೀರ್ತಿಯು ಪರ್ವತ ಶಿಖರದಂತೆ ಉನ್ನತವಾಗಿರುವುದು. ಪರಬ್ರಹ್ಮವೇ ನನ್ನ ಕಾರಣ. ಸೂರ್ಯನಲ್ಲಿ ಆತ್ಮತತ್ತ್ವವು ಇರುವಂತೆ ನಾನು ಆತ್ಮಸ್ವರೂಪನಾಗಿರುವೆನು; ನಾನು ವರ್ಚಸ್ಸಿನಿಂದ ಕೂಡಿದ ಆತ್ಮತತ್ತ್ವವಾಗಿರುತ್ತೇನೆ; ಮೇಧಾಸಂಪನ್ನನಾಗಿರುತ್ತೇನೆ.[೨] ನಾನು ಅಮೃತನೂ ಅವ್ಯಯನೂ ಆಗಿರುತ್ತೇನೆ. ಇದು ತ್ರಿಶಂಕುವಿನ ವೇದಾನುವಚನ.[೩]

[ಈ ಮಂತ್ರವು ಸ್ವಾಧ್ಯಾಯಕ್ಕಾಗಿ ಹೇಳಲ್ಪಟ್ಟಿದೆ. ಸ್ವಾಧ್ಯಾಯದಿಂದ ಶುದ್ಧ ಸತ್ತ್ವವುಳ್ಳವನಿಗೆ ಜ್ಞಾನವುಂಟಾಗುವುದು.

೧ ಸಂಸಾರವೆಂಬ ವೃಕ್ಷವನ್ನು ಅಂತರ್ಯಾಮಿಯಾಗಿ ಪ್ರೇರಿಸುವವನು.

೨ ಸರ್ವಜ್ಞತ್ವರೂಪವಾದ ಜ್ಞಾನವಿರುವುದರಿಂದ ಸುಮೇಧನು.

೩ ಬ್ರಹ್ಮವೇತ್ತನೂ ಬ್ರಹ್ಮಭೂತನೂ ಆದ ತ್ರಿಶಂಕುಋಷಿಯ ವೇದಾನುವಚನ. 'ವೇದಃ' ಎಂದರೆ ಜ್ಞಾನ, ಆತ್ಮೈಕತ್ವವಿಜ್ಞಾನ. ಅಂತಹ ಜ್ಞಾನವನ್ನು ಪಡೆದುಕೊಂಡ ಮೇಲೆ ಹೇಳಿದ್ದು ವೇದಾನುವಚನ. ತನ್ನ ಕೃತಕೃತ್ಯತೆಯನ್ನು ತಿಳಿಯಪಡಿಸಲು ವಾಮದೇವನಂತೆ (ಐತರೇಯ ಉ. ೨, ೪; ಬೃಹದಾರಣ್ಯಕ ಉ. ೧, ೪, ೧೦) ತ್ರಿಶಂಕುವು ಆರ್ಷದರ್ಶನದ ಮೂಲಕ ಆತ್ಮವಿದ್ಯಾಪ್ರಕಾಶಕವಾದ ಈ ಮಂತ್ರಾ ಮ್ನಾಯವನ್ನು ಕಂಡುಹಿಡಿದಿರುತ್ತಾನೆ ಎಂದರ್ಥ.]

# ಹನ್ನೊಂದನೆಯ ಅನುವಾಕ

ವೇದಮನೂಚ್ಯಾಚಾರ್ಯೋಽಂತೇವಾಸಿನಮನುಶಾಸ್ತಿ । ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಮ್ । ಧರ್ಮಾನ್ನ ಪ್ರಮದಿತವ್ಯಮ್ । ಕುಶಲಾನ್ನ ಪ್ರಮದಿತವ್ಯಮ್ । ಭೂತ್ಯೈ ನ ಪ್ರಮದಿತವ್ಯಮ್ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್ । ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ । ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ । ಯೇ ಕೇ ಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ । ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾ ದೇಯಮ್ । ಅಶ್ರದ್ಧಯಾಽದೇಯಮ್ । ಶ್ರಿಯಾ ದೇಯಮ್ । ಹ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ

ಧರ್ಮಕಾಮಾಃ ಸ್ಯುಃ । ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ । ಏಷ ಆದೇಶಃ । ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸನಮ್ । ಏವಮುಪಾಸಿತವ್ಯಮ್ । ಏವಮು ಚೈತದುಪಾಸ್ಯಮ್ ॥ ಇತಿ ಏಕಾದಶೋಽನುವಾಕಃ ॥

ವೇದಂ = ವೇದವನ್ನು ಅನೂಚ್ಯ = ಅಧ್ಯಾಪನೆಮಾಡಿ ಆಚಾರ್ಯಃ = ಆಚಾರ್ಯನು ಅಂತೇವಾಸಿನಂ = ಶಿಷ್ಯನನ್ನು ಅನುಶಾಸ್ತಿ = ಅನುಶಾಸನೆಮಾಡುತ್ತಾನೆ— ಸತ್ಯಂ = ಸತ್ಯವನ್ನು ವದ = ಹೇಳು; ಧರ್ಮಂ = ಧರ್ಮವನ್ನು ಚರ = ಆಚರಿಸು. ಸ್ವಾಧ್ಯಾಯಾತ್ ಮಾ ಪ್ರಮದಃ = ಅಧ್ಯಯನದಲ್ಲಿ ಪ್ರಮಾದಮಾಡಬೇಡ. ಆಚಾರ್ಯಾಯ = ಆಚಾರ್ಯನಿಗೆ ಪ್ರಿಯಂ = ಇಷ್ಟವಾದ ಧನಂ = ಧನವನ್ನು ಆಹೃತ್ಯ = ತಂದು ಕೊಟ್ಟು ಪ್ರಜಾತಂತುಂ = ಸಂತತಿಯನ್ನು ಮಾ ವ್ಯವಚ್ಛೇತ್ಸೀಃ = ವಿಚ್ಛಿನ್ನಗೊಳಿಸದಿರು. ಸತ್ಯಾತ್ = ಸತ್ಯದಿಂದ ನ ಪ್ರಮದಿತವ್ಯಂ = ಕದಲಕೂಡದು; ಧರ್ಮಾತ್ = ಧರ್ಮದಿಂದ ನ ಪ್ರಮದಿತವ್ಯಂ = ಕದಲಕೂಡದು; ಕುಶಲಾತ್ = ಕುಶಲದಿಂದ ನ ಪ್ರಮದಿತವ್ಯಂ = ಕದಲಕೂಡದು. ಭೂತ್ಯೈ = ಮಂಗಳಯುಕ್ತವಾದ ಕರ್ಮದಿಂದ ನ ಪ್ರಮದಿತವ್ಯಂ = ಕದಲಕೂಡದು; ಸ್ವಾಧ್ಯಾಯಪ್ರವಚನಾಭ್ಯಾಂ = ಸ್ವಾಧ್ಯಾಯಪ್ರವಚನಗಳಿಂದ ನ ಪ್ರಮದಿತವ್ಯಂ = ಕದಲಕೂಡದು; ದೇವಪಿತೃಕಾರ್ಯಾಭ್ಯಾಂ = ದೇವಪಿತೃಗಳ ಕಾರ್ಯಗಳಿಂದ ನ ಪ್ರಮದಿತವ್ಯಂ = ಕದಲಕೂಡದು. ಮಾತೃದೇವಃ ಭವ = ತಾಯಿಯೇ ನಿನಗೆ ದೇವರಾಗಿರಲಿ; ಪಿತೃದೇವಃ ಭವ = ತಂದೆಯೇ ನಿನಗೆ ದೇವರಾಗಿರಲಿ; ಆಚಾರ್ಯದೇವಃ ಭವ = ಆಚಾರ್ಯನೇ ನಿನಗೆ ದೇವರಾಗಿರಲಿ; ಅತಿಥಿದೇವಃ ಭವ = ಅತಿಥಿಯೇ ನಿನಗೆ ದೇವರಾಗಿರಲಿ. ಯಾನಿ = ಯಾವ ಕರ್ಮಾಣಿ = ಕರ್ಮಗಳು ಅನವದ್ಯಾನಿ = ಅನಿಂದಿತವೊ ತಾನಿ=ಅವುಗಳು ಸೇವಿತವ್ಯಾನಿ=ಸೇವಿಸತಕ್ಕವುಗಳು, ನೋ [ನ+ಉ] ಇತರಾಣಿ= ಉಳಿದವುಗಳಲ್ಲ. ಯಾನಿ = ಯಾವುವು ಅಸ್ಮಾಕಂ = ನಮ್ಮ ಸುಚರಿತಾನಿ = ಒಳ್ಳೆಯ ನಡತೆಗಳೊ ತಾನಿ = ಅವುಗಳು ತ್ವಯಾ = ನಿನ್ನಿಂದ ಉಪಾಸ್ಯಾನಿ = ಸೇವಿಸಲ್ಪಡತಕ್ಕವುಗಳು, ನೋ ಇತರಾಣಿ = ಉಳಿದವುಗಳಲ್ಲ. ಯೇ ಕೇ ಚ = ಯಾವ ಯಾವ ಬ್ರಾಹ್ಮಣಾಃ = ಬ್ರಾಹ್ಮಣರು ಅಸ್ಮತ್ = ನಮಗಿಂತ ಶ್ರೇಯಾಂಸಃ = ಶ್ರೇಷ್ಠರೊ ತೇಷಾಂ = ಅವರನ್ನು ಆಸನೇನ = ಆಸನಾದಿಪೂರ್ವಕ ತ್ವಯಾ ಪ್ರಶ್ವಸಿತವ್ಯಂ = ನೀನು ಆದರಿಸಬೇಕು.

ವೇದವನ್ನು ಅಧ್ಯಾಪನೆಮಾಡಿ ಆಚಾರ್ಯನು ಶಿಷ್ಯನಿಗೆ ಹೀಗೆ ಅನುಶಾಸನೆ ಮಾಡುತ್ತಾನೆ:[೧] ಸತ್ಯವನ್ನು ಹೇಳು; ಧರ್ಮವನ್ನು ಆಚರಿಸು. ಅಧ್ಯಯನದಲ್ಲಿ ಪ್ರಮಾದಮಾಡಬೇಡ. ಆಚಾರ್ಯನಿಗೆ ಇಷ್ಟವಾದ ಧನವನ್ನು

ತಂದುಕೊಟ್ಟು ಸಂತತಿಯನ್ನು ವಿಚ್ಛಿನ್ನಗೊಳಿಸದಿರು. ಸತ್ಯದಿಂದ ಕದಲಕೂಡದು; ಧರ್ಮದಿಂದ ಕದಲಕೂಡದು; ಕುಶಲದಿಂದ ಕದಲಕೂಡದು; ಮಂಗಳಯುಕ್ತವಾದ ಕರ್ಮದಿಂದ ಕದಲಕೂಡದು; ಸ್ವಾಧ್ಯಾಯಪ್ರವಚನಗಳಿಂದ ಕದಲಕೂಡದು; ದೇವಪಿತೃಗಳ ಕಾರ್ಯದಿಂದ ಕದಲಕೂಡದು. ತಾಯಿಯೇ ನಿನಗೆ ದೇವರಾಗಿರಲಿ; ತಂದೆಯೇ ನಿನಗೆ ದೇವರಾಗಿರಲಿ; ಅತಿಥಿಯೇ ನಿನಗೆ ದೇವರಾಗಿರಲಿ. ಯಾವ ಕರ್ಮಗಳು ಅನಿಂದಿತವೊ ಅವುಗಳನ್ನು ಸೇವಿಸಬೇಕು, ಉಳಿದವುಗಳನ್ನು ಸೇವಿಸಕೂಡದು.[೨] ನಮ್ಮಲ್ಲಿ ಯಾವ ಒಳ್ಳೆಯ ನಡತೆಗಳಿವೆಯೊ ಅವುಗಳನ್ನೇ ಸೇವಿಸಬೇಕು, ಉಳಿದವುಗಳನ್ನು ಸೇವಿಸಕೂಡದು.[೩] ನಮಗಿಂತ ಉತ್ತಮರಾದ ಯಾವ ಯಾವ ಬ್ರಾಹ್ಮಣರಿರುವರೊ ಅವರನ್ನು ಆಸನಾದಿಪೂರ್ವಕ ನೀನು ಆದರಿಸಬೇಕು.[೪]

[ಬ್ರಹ್ಮಜ್ಞಾನಕ್ಕೆ ಮೊದಲು ಸಮಸ್ತ ಶ್ರೌತಸ್ಮಾರ್ತಕರ್ಮಗಳನ್ನು ನಿಯಮದಿಂದ ಮಾಡಬೇಕೆಂದು ಈ ಅನುವಾಕದಲ್ಲಿ ವಿಧಿಸಿದೆ. ಪುರುಷಸಂಸ್ಕಾರವೇ ಈ ಅನುಶಾಸನಶ್ರುತಿಯ ಉದ್ದೇಶ. ಏಕೆಂದರೆ ವಿಶುದ್ಧಸತ್ತ್ವನಾದವನಿಗೆ ಆತ್ಮಜ್ಞಾನವು ಕೂಡಲೇ ಉತ್ಪನ್ನವಾಗುವುದು.

[೧] 'ಅನು' ಗ್ರಂಥಗ್ರಹಣವಾದ ಮೇಲೆ 'ಶಾಸ್ತಿ' ಅರ್ಥಗ್ರಹಣಮಾಡಿಸುತ್ತಾನೆ ಎಂದರ್ಥ. ಅಧ್ಯಯನಮಾಡಿದವನು ಧರ್ಮಜಿಜ್ಞಾಸೆಯನ್ನು ಮಾಡದೆ ಗುರುಕುಲದಿಂದ ಹಿಂತಿರುಗಕೂಡದು.

[೨] ದೋಷಯುಕ್ತವಾದ ಕರ್ಮಗಳನ್ನು ಶಿಷ್ಟರು ಮಾಡಿದರೂ ನೀನು ಮಾಡಕೂಡದು.

[೩] ಆಚಾರ್ಯರು ವಿರುದ್ಧಕರ್ಮಗಳನ್ನು ಆಚರಿಸಿದರೂ ನೀನು ಆಚರಿಸಕೂಡದು.

[೪] ಶ್ರಮವನ್ನು ಹೋಗಲಾಡಿಸಬೇಕು; ಅಥವಾ ಅವರು ಗೋಷ್ಠಿಯಲ್ಲಿ ಕುಳಿತಿರುವಾಗ ಉಸಿರಾಡದೆ ಅವರು ಹೇಳಿದುದರ ಸಾರವನ್ನು ಗ್ರಹಿಸಬೇಕು.]

**ಶ್ರದ್ಧಯಾ** = ಶ್ರದ್ಧೆಯಿಂದ **ದೇಯಂ** = ಕೊಡಬೇಕು; **ಅಶ್ರದ್ಧಯಾ** = ಅಶ್ರದ್ಧೆಯಿಂದ **ಅದೇಯಂ** = ಕೊಡಬಾರದು. **ಶ್ರಿಯಾ** = ತನ್ನ ಐಶ್ವರ್ಯಕ್ಕೆ ತಕ್ಕಂತೆ **ದೇಯಂ** = ಕೊಡಬೇಕು; **ಹ್ರಿಯಾ** = ವಿನಯದಿಂದ **ದೇಯಂ** = ಕೊಡಬೇಕು; **ಭಿಯಾ** = ಭಯದಿಂದ **ದೇಯಂ** = ಕೊಡಬೇಕು; **ಸಂವಿದಾ** = ಮಿತ್ರಭಾವದಿಂದ **ದೇಯಂ** = ಕೊಡಬೇಕು.

ಶ್ರದ್ಧೆಯಿಂದ ಕೊಡಬೇಕು; ಅಶ್ರದ್ಧೆಯಿಂದ ಕೊಡಬಾರದು. ತನ್ನ ಐಶ್ವರ್ಯಕ್ಕೆ ತಕ್ಕಂತೆ ಕೊಡಬೇಕು; ವಿನಯದಿಂದ ಕೊಡಬೇಕು; ಭಯದಿಂದ ಕೊಡಬೇಕು; ಮಿತ್ರಭಾವದಿಂದ ಕೊಡಬೇಕು.

**ಅಥ**=ಇನ್ನು **ತೇ**=ನಿನಗೆ **ಕರ್ಮವಿಚಿಕಿತ್ಸಾ ವಾ**=ಶ್ರೌತಸ್ಮಾರ್ತಕರ್ಮಗಳ ವಿಷಯದಲ್ಲಿ ಸಂಶಯವು **ವೃತ್ತವಿಚಿಕಿತ್ಸಾ ವಾ** = ಅಥವಾ ಆಚಾರವಿಷಯದಲ್ಲಿ ಸಂಶಯವು **ಯದಿ ಸ್ಯಾತ್**=ಉಂಟಾದರೆ **ತತ್ರ**=ಅಲ್ಲಿ **ಯೇ**=ಯಾವ **ಸಂಮರ್ಶಿನಃ**= ವಿಚಾರಕ್ಷಮರಾದ **ಯುಕ್ತಾಃ** = ಕರ್ಮದಲ್ಲಿ ಸಮರ್ಥರಾದ **ಆಯುಕ್ತಾಃ** = ಸ್ವತಂತ್ರರಾದ **ಅಲೂಕ್ಷಾಃ**=ಅಕ್ರೂರರಾದ **ಧರ್ಮಕಾಮಾಃ**=ಅಕಾಮಹತರಾದ **ಬ್ರಾಹ್ಮಣಾಃ ಸ್ಯುಃ** = ಬ್ರಾಹ್ಮಣರಿರುವರೊ, **ತೇ**=ಅವರು **ತತ್ರ**=ಅಲ್ಲಿ **ಯಥಾ**= ಹೇಗೆ **ವರ್ತೇರನ್**=ವರ್ತಿಸುವರೊ **ತಥಾ**=ಹಾಗೆಯೇ **ತತ್ರ**=ಅಲ್ಲಿ **ವರ್ತೇಥಾಃ**= ವರ್ತಿಸು.

ಇನ್ನು ನಿನಗೆ ಶ್ರೌತಸ್ಮಾರ್ತಕರ್ಮವಿಷಯದಲ್ಲಾಗಲಿ ಆಚಾರವಿಷಯದಲ್ಲಾಗಲಿ ಸಂಶಯವುಂಟಾದರೆ ಅಲ್ಲಿ ವಿಚಾರಕ್ಷಮರೂ, ಕರ್ಮದಲ್ಲಿ ಸಮರ್ಥರೂ, ಅಕ್ರೂರರೂ, ಅಕಾಮಹತರೂ ಆದ ಬ್ರಾಹ್ಮಣರು ಹೇಗೆ ವರ್ತಿಸುವರೊ ಹಾಗೆಯೇ ನೀನು ಅಲ್ಲಿ ವರ್ತಿಸು.

**ಅಥ**=ಇನ್ನು **ಅಭ್ಯಾಖ್ಯಾತೇಷು**=ದೋಷಹೊರಿಸಲ್ಪಟ್ಟವರ ವಿಷಯದಲ್ಲಿ- **ಯೇ ಸಂಮರ್ಶಿನಃ ಯುಕ್ತಾಃ ಆಯುಕ್ತಾಃ ಅಲೂಕ್ಷಾಃ ಧರ್ಮಕಾಮಾಃ ಬ್ರಾಹ್ಮಣಾಃ ಸ್ಯುಃ, ತೇ ತೇಷು ಯಥಾ ವರ್ತೇರನ್, ತಥಾ ತೇಷು ವರ್ತೇಥಾಃ** [ಅರ್ಥ ಹಿಂದಿನಂತೆಯೇ].

ಇನ್ನು ದೋಷಹೊರಿಸಲ್ಪಟ್ಟವರ ವಿಷಯದಲ್ಲಿ: ವಿಚಾರಕ್ಷಮರೂ, ಕರ್ಮದಲ್ಲಿ ಸಮರ್ಥರೂ, ಅಕ್ರೂರರೂ, ಅಕಾಮಹತರೂ ಆದ ಬ್ರಾಹ್ಮಣರು ಹೇಗೆ ಅವರಲ್ಲಿ ವರ್ತಿಸುವರೊ ಹಾಗೆಯೇ ನೀನು ಅವರಲ್ಲಿ ವರ್ತಿಸು.

**ಏಷಃ**=ಇದು **ಆದೇಶಃ**=ವಿಧಿ. **ಏಷಃ**=ಇದು **ಉಪದೇಶಃ**=ಉಪದೇಶ. **ಏಷಾ**=ಇದು **ವೇದೋಪನಿಷತ್**=ವೇದರಹಸ್ಯ. **ಏತತ್**=ಇದು **ಅನುಶಾಸನಂ**= ಈಶ್ವರಾಜ್ಞೆ. **ಏವಂ**=ಹೀಗೆ **ಉಪಾಸಿತವ್ಯಂ**=ನಡೆಯತಕ್ಕದ್ದು. **ಏವಂ ಉ ಚ**= ಹೀಗೆ **ಏತತ್**=ಇದು **ಉಪಾಸ್ಯಂ**=ಅನುಷ್ಠೇಯವು.

ಇದು ವಿಧಿ. ಇದು ಉಪದೇಶ. ಇದು ವೇದರಹಸ್ಯ. ಇದು ಈಶ್ವರಾಜ್ಞೆ. ಹೀಗೆ ಉಪಾಸಿಸಬೇಕು. ಹೀಗೆ ಇದು ಅನುಷ್ಠೇಯವು.

## ಹನ್ನೆರಡನೆಯ ಅನುವಾಕ

ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್ । ಋತ-ಮವಾದಿಷಮ್ । ಸತ್ಯಮವಾದಿಷಮ್ । ತನ್ಮಾಮಾವೀತ್ । ತದ್ವಕ್ತಾರಮಾವೀತ್ । ಆವೀನ್ಮಾಮ್ । ಆವೀದ್ವಕ್ತಾರಮ್ । ಓಂ ಶಾಂತಿಃ ಶಾಂತಿಃ ಶಾಂತಿಃ ॥ ಇತಿ ದ್ವಾದಶೋಽನುವಾಕಃ ॥

ಅವಾದಿಷಂ = ಹೇಳಿದ್ದೇನೆ. ಆವೀತ್ = ಕಾಪಾಡಿತು. [ಉಳಿದವು ಹಿಂದೆ ಹೇಳಿದಂತೆ].

ಮಿತ್ರನು ನಮಗೆ ಸುಖವನ್ನುಂಟುಮಾಡಲಿ. ವರುಣನು ನಮಗೆ ಸುಖವನ್ನುಂಟುಮಾಡಲಿ. ಅರ್ಯಮನು ನಮಗೆ ಸುಖವನ್ನುಂಟುಮಾಡಲಿ. ಇಂದ್ರನೂ ಬೃಹಸ್ಪತಿಯೂ ನಮಗೆ ಸುಖವನ್ನುಂಟುಮಾಡಲಿ. ಉರುಕ್ರಮನಾದ ವಿಷ್ಣುವು ನಮಗೆ ಸುಖವನ್ನುಂಟುಮಾಡಲಿ. ಬ್ರಹ್ಮಕ್ಕೆ ನಮಸ್ಕಾರ. ಹೇ ವಾಯುವೆ, ನಿನಗೆ ನಮಸ್ಕಾರ. ನೀನೇ ಪ್ರತ್ಯಕ್ಷಬ್ರಹ್ಮವಾಗಿರುತ್ತೀಯೆ. ನೀನೇ ಪ್ರತ್ಯಕ್ಷಬ್ರಹ್ಮವೆಂದು ಹೇಳಿದ್ದೇನೆ; ಋತವೆಂದು ಹೇಳಿದ್ದೇನೆ; ಸತ್ಯವೆಂದು ಹೇಳಿದ್ದೇನೆ. ಅದು ನನ್ನನ್ನು ಕಾಪಾಡಿತು; ಅದು ಆಚಾರ್ಯನನ್ನು ಕಾಪಾಡಿತು. ನನ್ನನ್ನು ಕಾಪಾಡಿತು, ಆಚಾರ್ಯನನ್ನು ಕಾಪಾಡಿತು.

ಓಂ ಶಾಂತಿಃ ಶಾಂತಿಃ ಶಾಂತಿಃ

# ಬ್ರಹ್ಮಾನಂದವಲ್ಲೀ

## ಮೊದಲನೆಯ ಅನುವಾಕ

ಹರಿಃ ಓಂ । ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾ-ಮವತು । ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ ।

ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರ-ವಾವಹೈ । ತೇಜಸ್ವಿ ನಾವಧೀತಮಸ್ತು । ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥ ಇತಿ ಪ್ರಥಮೋಽನುವಾಕಃ ॥

ನೌ = ನಮ್ಮಿಬ್ಬರನ್ನೂ **ಸಹ** = ಜೊತೆಯಲ್ಲಿ **ಅವತು** = ಕಾಪಾಡಲಿ; **ನೌ** = ನಮ್ಮಿಬ್ಬರನ್ನೂ **ಸಹ** = ಜೊತೆಯಲ್ಲಿ **ಭುನಕ್ತು** = ಪೋಷಿಸಲಿ; **ಸಹ** = ಜೊತೆಯಲ್ಲಿ **ವೀರ್ಯಂ** = ಸಾಮರ್ಥ್ಯವನ್ನು **ಕರವಾವಹೈ** = ಉಂಟುಮಾಡುವಂತಾಗಲಿ; **ನೌ** = ನಮ್ಮಿಬ್ಬರ **ಅಧೀತಂ** = ಅಧ್ಯಯನವು **ತೇಜಸ್ವಿ ಅಸ್ತು** = ತೇಜಸ್ವಿಯಾಗಲಿ; **ಮಾ ವಿದ್ವಿಷಾವಹೈ** = ದ್ವೇಷಮಾಡದೆ ಇರುವಂತಾಗಲಿ.

(ಪರಮೇಶ್ವರನು) ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ; ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ; (ನಾವು) ಜೊತೆಯಲ್ಲಿ ಸಾಮರ್ಥ್ಯವನ್ನು ಉಂಟುಮಾಡುವಂತಾಗಲಿ; ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ; (ನಾವು ಪರಸ್ಪರ) ದ್ವೇಷಮಾಡದೆ ಇರುವಂತಾಗಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

[ಮುಂದೆ ಹೇಳುವ ಬ್ರಹ್ಮವಿದ್ಯಾಪ್ರಾಪ್ತಿಗೆ ಇರಬಹುದಾದ ವಿಘ್ನಗಳ ನಾಶಕ್ಕಾಗಿ ಈ ಶಾಂತಿಯನ್ನು ಹೇಳಿದೆ.]

ಓಂ ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ತ್ಸಹ । ಬ್ರಹ್ಮಣಾ ವಿಪಶ್ಚಿತೇತಿ । ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್, ಅನ್ನಾತ್ ಪುರುಷಃ । ಸ ವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ । ಅಯಂ ದಕ್ಷಿಣಃ ಪಕ್ಷಃ । ಅಯಮುತ್ತರಃ ಪಕ್ಷಃ । ಅಯಮಾತ್ಮಾ । ಇದಂ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ಇತಿ ಪ್ರಥಮೋಽನುವಾಕಃ ॥

ಓಂ ಬ್ರಹ್ಮವಿತ್ = ಬ್ರಹ್ಮವನ್ನು ತಿಳಿದವನು ಪರಂ = ಬ್ರಹ್ಮವನ್ನು ಆಪ್ನೋತಿ = ಹೊಂದುತ್ತಾನೆ. ತತ್ = ಈ ವಿಷಯದಲ್ಲಿ ಏಷಾ = ಈ ಋಕ್ಕು ಅಭ್ಯುಕ್ತಾ = ಹೇಳಲ್ಪಟ್ಟಿರುತ್ತದೆ- ಬ್ರಹ್ಮ = ಬ್ರಹ್ಮವು ಸತ್ಯಂ = ಸತ್ಯ, ಜ್ಞಾನಂ = ಜ್ಞಾನ, ಅನಂತಂ= ಅನಂತ, ಯಃ=ಯಾವನು ಪರಮೇ ವ್ಯೋಮನ್ [ವ್ಯೋಮ್ನಿ] = ಪರಮವ್ಯೋಮದಲ್ಲಿ ಗುಹಾಯಾಂ = ಗುಹೆಯಲ್ಲಿ ನಿಹಿತಂ = ಇಟ್ಟಿರುವ ಬ್ರಹ್ಮ = ಬ್ರಹ್ಮವನ್ನು ವೇದ = ಅರಿತುಕೊಳ್ಳುವನೊ, ಸಃ = ಅವನು ಸರ್ವಾನ್ ಕಾಮಾನ್ = ಎಲ್ಲ ಕಾಮಗಳನ್ನು ವಿಪಶ್ಚಿತಾ ಬ್ರಹ್ಮಣಾ = ಸರ್ವಜ್ಞಸ್ವರೂಪವಾದ ಬ್ರಹ್ಮವಾಗಿ ಸಹ = ಒಟ್ಟಿಗೆ ಅಶ್ನುತೇ = ಹೊಂದುತ್ತಾನೆ.

ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ಹೊಂದುತ್ತಾನೆ.[೧] ಈ ವಿಷಯದಲ್ಲಿ ಈ ಋಕ್ಕು ಹೇಳಲ್ಪಟ್ಟಿರುತ್ತದೆ: ಬ್ರಹ್ಮವು ಸತ್ಯ, ಜ್ಞಾನ, ಅನಂತ.[೨] ಯಾವನು ಪರಮವ್ಯೋಮದಲ್ಲಿರುವ[೩] ಗುಹೆಯಲ್ಲಿ[೪] ಬ್ರಹ್ಮವನ್ನು ಅರಿತುಕೊಳ್ಳುವನೊ ಅವನು ಸರ್ವಜ್ಞಸ್ವರೂಪವಾದ ಬ್ರಹ್ಮವಾಗಿ ಎಲ್ಲ ಕಾಮಗಳನ್ನು ಒಟ್ಟಿಗೆ ಹೊಂದುತ್ತಾನೆ.

[ಎಲ್ಲ ಉಪದ್ರವಗಳಿಗೂ ಕಾರಣವಾಗಿರುವ ಅಜ್ಞಾನದ ನಿವೃತ್ತಿಗಾಗಿ ಮತ್ತು ಎಲ್ಲ ಉಪಾಧಿವಿಶೇಷಗಳಿಂದ ವರ್ಜಿತವಾದ ಆತ್ಮನ ದರ್ಶನಕ್ಕಾಗಿ ಈ ವಲ್ಲಿಯು ಆರಂಭಿಸಲ್ಪಟ್ಟಿದೆ.

[೧] ಇದು ಈ ವಲ್ಲಿಯ ಸೂತ್ರವಾಕ್ಯ. ಬ್ರಹ್ಮದ ಸ್ವರೂಪವು ಅನಿರ್ಧಾರಿತವಾಗಿರುವುದರಿಂದ ಅದಕ್ಕೆ ಎಲ್ಲಕ್ಕಿಂತಲೂ ಭಿನ್ನವಾಗಿರುವ ಸ್ವರೂಪವಿಶೇಷವನ್ನು ತಿಳಿಸುವ ಲಕ್ಷಣವನ್ನು ಹೇಳಿ ಅದರ ಸ್ವರೂಪವನ್ನು ನಿರ್ಧರಿಸುವುದಕ್ಕಾಗಿಯೂ, ಬ್ರಹ್ಮವು ನಮಗಿಂತ ಅಭಿನ್ನವಾದ ಪ್ರತ್ಯಗಾತ್ಮ ಎಂದು ವಿಶೇಷವಾಗಿ ಅರಿಯುವುದಕ್ಕಾಗಿಯೂ ಮತ್ತು ಬ್ರಹ್ಮವಿದ್ಯೆಯ ಫಲವು ಸರ್ವಾತ್ಮಭಾವ ಎಂದರೆ ಯಾವ ಸಂಸಾರಧರ್ಮಗಳೂ ಇಲ್ಲದ ಬ್ರಹ್ಮಸ್ವರೂಪ ಎಂದು ತಿಳಿಸುವುದಕ್ಕಾಗಿಯೂ ಈ ಋಕ್ಕನ್ನು ಉದಾಹರಿಸಿದೆ.

[೨] ಸತ್ಯ ಜ್ಞಾನ ಅನಂತ ಎಂಬ ಮೂರು ಪದಗಳು ವಿಶೇಷ್ಯವಾದ ಬ್ರಹ್ಮದ ಲಕ್ಷಣವನ್ನು ತಿಳಿಸುತ್ತವೆ. ಬ್ರಹ್ಮವೇ ಸತ್ಯ, ಬ್ರಹ್ಮವೇ ಜ್ಞಾನ ಮತ್ತು ಬ್ರಹ್ಮವೇ ಅನಂತ. ರೂಪವು ನಿಶ್ಚಯವಾದ ಬಳಿಕ ಅದನ್ನು ಬಿಡದಿರುವ ವಸ್ತುವು ಸತ್ಯ. ನಿಶ್ಚಯವಾದ ತನ್ನ ರೂಪವನ್ನು ಬಿಡುವ ವಸ್ತುವು ಅನೃತ. ಸತ್ಯವು ಕಾರಣ, ಅನೃತವು ಕಾರ್ಯ. ಆದರೆ ಕಾರಣವಾದ ಬ್ರಹ್ಮವು ಜಡವಲ್ಲ; ಆದುದರಿಂದ ಬ್ರಹ್ಮವು ಜ್ಞಾನವೆಂದು ಹೇಳಿದೆ. ಜ್ಞಾನವೆಂದರೆ ಜ್ಞಪ್ತಿ ಅಥವಾ ಅರಿವು, ಜ್ಞಾತೃವಲ್ಲ. ಜ್ಞಾನಶಬ್ದವು ಭಾವಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಕರ್ತೃ, ಕ್ರಿಯೆ, ಕರ್ಮ ಇವೇ ಮೊದಲಾದ ಅರ್ಥಗಳಾಗುವುದಿಲ್ಲ. ಲೌಕಿಕಜ್ಞಾನಕ್ಕೆ ಕೊನೆಯಿರುವಂತೆ ಈ ಜ್ಞಾನಕ್ಕೆ ಕೊನೆಯಿಲ್ಲ. ಆದುದರಿಂದ ಬ್ರಹ್ಮವನ್ನು 'ಅನಂತ' ಎಂದು ಹೇಳಿದೆ. ದೇಶತಃ ಕಾಲತಃ ಮತ್ತು ವಸ್ತುತಃ ಪರಿಚ್ಛೇದವಾಗದಿರುವುದು ಅನಂತ.

[೩] ಹೃದಯಾಕಾಶದಲ್ಲಿ.

[೪] ಬುದ್ಧಿಯಲ್ಲಿ.]

**ತಸ್ಮಾತ್ ವೈ ಏತಸ್ಮಾತ್**=ಆ ಈ **ಆತ್ಮನಃ**=ಆತ್ಮನಿಂದ **ಆಕಾಶಃ ಸಂಭೂತಃ**=ಆಕಾಶವು ಉತ್ಪನ್ನವಾಯಿತು. **ಆಕಾಶಾತ್** = ಆಕಾಶದಿಂದ **ವಾಯುಃ** = ವಾಯು; **ವಾಯೋಃ** = ವಾಯುವಿನಿಂದ **ಅಗ್ನಿಃ** = ಅಗ್ನಿ; **ಅಗ್ನೇಃ** = ಅಗ್ನಿಯಿಂದ **ಆಪಃ** = ನೀರು; **ಅದ್ಭ್ಯಃ** = ನೀರಿನಿಂದ **ಪೃಥಿವೀ** = ಪೃಥ್ವೀ; **ಪೃಥಿವ್ಯಾಃ** = ಪೃಥ್ವಿಯಿಂದ **ಓಷಧಯಃ** = ಸಸ್ಯಗಳು; **ಓಷಧೀಭ್ಯಃ** = ಸಸ್ಯಗಳಿಂದ **ಅನ್ನಂ** = ಅನ್ನ; **ಅನ್ನಾತ್** = ಅನ್ನದಿಂದ **ಪುರುಷಃ** = ಪುರುಷನು. **ಸಃ ವೈ ಏಷಃ** = ಆ ಈ **ಪುರುಷಃ** = ಪುರುಷನು **ಅನ್ನರಸಮಯಃ** = ಅನ್ನರಸಮಯನು. **ತಸ್ಯ** = ಅವನಿಗೆ **ಇದಂ ಏವ** = ಇದೇ **ಶಿರಃ** = ತಲೆ; **ಅಯಂ** = ಇದು **ದಕ್ಷಿಣಃ ಪಕ್ಷಃ** = ದಕ್ಷಿಣ ಪಕ್ಷ; **ಅಯಂ** = ಇದು **ಉತ್ತರಃ ಪಕ್ಷಃ** = ಉತ್ತರ ಪಕ್ಷ. **ಅಯಂ** = ಇದು **ಆತ್ಮಾ** = ಆತ್ಮ; **ಇದಂ** = ಇದು **ಪುಚ್ಛಂ** = ಪುಚ್ಛ, **ಪ್ರತಿಷ್ಠಾ** = ಪ್ರತಿಷ್ಠೆ. **ತತ್ ಅಪಿ** = ಆ ವಿಷಯದಲ್ಲಿ **ಏಷಃ ಶ್ಲೋಕಃ ಭವತಿ** = ಈ ಮಂತ್ರವಿರುವುದು.

ಆ[1] ಈ[2] ಆತ್ಮನಿಂದ[3] ಆಕಾಶವು[4] ಉತ್ಪನ್ನವಾಯಿತು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥ್ವೀ, ಪೃಥ್ವಿಯಿಂದ ಸಸ್ಯಗಳು, ಸಸ್ಯಗಳಿಂದ ಅನ್ನ, ಅನ್ನದಿಂದ ಪುರುಷ[5]—(ಹೀಗೆ ಉತ್ಪತ್ತಿಯ ಕ್ರಮ). ಆ ಈ ಪುರುಷನು ಅನ್ನರಸಮಯನು.[6] ಅವನಿಗೆ ಇದೇ ತಲೆ; ಇದು[7] ದಕ್ಷಿಣ ಪಕ್ಷ; ಇದು[8] ಉತ್ತರ ಪಕ್ಷ; ಇದು ಆತ್ಮ;[9] ಇದು[10] ಪುಚ್ಛ ಮತ್ತು ಪತಿಷ್ಠೆ.[11] ಆ ವಿಷಯದಲ್ಲಿ ಈ ಮಂತ್ರವಿರುವುದು.

[[1] ಮೂಲವಾಕ್ಯದಲ್ಲಿ ಸೂತ್ರಿತವಾಗಿರುವ ಬ್ರಹ್ಮ.

[2] ಅನಂತರ ಮಂತ್ರವಾಕ್ಯದಲ್ಲಿ ಲಕ್ಷಿತವಾಗಿರುವ ಬ್ರಹ್ಮ.

[3] ಬ್ರಹ್ಮವು ಎಲ್ಲಕ್ಕೂ ಆತ್ಮವಾಗಿರುವುದರಿಂದ ಇಲ್ಲಿ ಆತ್ಮನೆಂದು ಕರೆದಿದೆ.

[4] ಮೂರ್ತದ್ರವ್ಯಗಳಿಗೆ ಅವಕಾಶವನ್ನುಂಟುಮಾಡುವ ಭೂತ.

[5] ಅವಯವಗಳುಳ್ಳ ಮನುಷ್ಯ.

[6] ಅನ್ನರಸದ ವಿಕಾರ ಅಥವಾ ಕಾರ್ಯ.

[7] ಬಲತೋಳು.

[8] ಎಡತೋಳು.

[9] ಮಧ್ಯದಲ್ಲಿರುವ ದೇಹಭಾಗವು ಅಂಗಗಳಿಗೆ ಆತ್ಮ.

[10] ನಾಭಿಯ ಕೆಳಭಾಗದಲ್ಲಿರುವ ಅಂಗ.

[11] ಪುಚ್ಛದಂತೆ ಇರುವುದರಿಂದ ಇದನ್ನು ಪುಚ್ಛವೆಂದು ಕರೆದಿದೆ. ಇದರ ಮೂಲಕ ಮನುಷ್ಯನು ನಿಲ್ಲುವುದರಿಂದ ಇದನ್ನು ಪ್ರತಿಷ್ಠೆಯೆಂದು ಕರೆದಿದೆ.]

## ಎರಡನೆಯ ಅನುವಾಕ

ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್‌ಂ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿಯಂತ್ಯಂತತಃ । ಅನ್ನಗ್‌ಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ ಸರ್ವೌಷಧಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್‌ಂ ಹಿ ಭೂತಾನಾಂ ಜ್ಯೇಷ್ಠಮ್ ॥ ತಸ್ಮಾತ್ ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ । ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಽಂತರ ಆತ್ಮಾ ಪ್ರಾಣಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಾಣ ಏವ ಶಿರಃ । ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ । ಪೃಥಿವೀ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ಇತಿ ದ್ವಿತೀಯೋಽನುವಾಕಃ ॥

ಯಾಃ ಕಾಃ ಚ = ಯಾವ ಯಾವ ಪ್ರಜಾಃ = ಪ್ರಾಣಿಗಳು ಪೃಥಿವೀಂ = ಭೂಮಿಯನ್ನು ಶ್ರಿತಾಃ = ಆಶ್ರಯಿಸಿರುವುವೊ [ತಾಃ = ಅವೆಲ್ಲವೂ] ಅನ್ನಾತ್ ವೈ = ಅನ್ನದಿಂದಲೇ ಪ್ರಜಾಯಂತೇ = ಹುಟ್ಟುತ್ತವೆ; ಅಥೋ = ಹಾಗೆಯೇ ಅನ್ನೇನ ಏವ = ಅನ್ನದಿಂದಲೇ ಜೀವಂತಿ = ಜೀವಿಸುತ್ತವೆ. ಅಥ = ಮತ್ತು ಅಂತತಃ = ಕೊನೆಯಲ್ಲಿ ಏನತ್ = ಇದನ್ನು ಅಪಿಯಂತಿ = ಪ್ರವೇಶಿಸುತ್ತವೆ. ಅನ್ನಂ ಹಿ = ಅನ್ನವೇ ಭೂತಾನಾಂ = ಪ್ರಾಣಿಗಳಲ್ಲಿ ಜ್ಯೇಷ್ಠಂ = ಜ್ಯೇಷ್ಠವಲ್ಲವೆ? ತಸ್ಮಾತ್ = ಆದುರಿಂದ [ಅನ್ನಂ = ಅನ್ನವು] ಸರ್ವೌಷಧಂ [ಇತಿ] = ಸರ್ವೌಷಧವು ಎಂದು ಉಚ್ಯತೇ = ಹೇಳಲ್ಪಡುತ್ತದೆ. ಯೇ ವೈ = ಯಾರು ಅನ್ನಂ = ಅನ್ನವನ್ನು ಬ್ರಹ್ಮ [ಇತಿ] =

ಬ್ರಹ್ಮವೆಂದು **ಉಪಾಸತೇ** = ಉಪಾಸಿಸುತ್ತಾರೆಯೊ **ತೇ** = ಅವರು **ಸರ್ವಂ** = ಎಲ್ಲ **ಅನ್ನಂ** = ಅನ್ನವನ್ನು **ಆಪ್ನುವಂತಿ** = ಹೊಂದುತ್ತಾರೆ. **ಅನ್ನಂ ಹಿ** = ಅನ್ನವೇ **ಭೂತಾನಾಂ** = ಪ್ರಾಣಿಗಳಲ್ಲಿ **ಜ್ಯೇಷ್ಠಂ** = ಜ್ಯೇಷ್ಠವಲ್ಲವೆ? **ತಸ್ಮಾತ್** = ಆದುದರಿಂದ [ಅನ್ನಂ=ಅನ್ನವು] **ಸರ್ವೌಷಧಂ** [ಇತಿ] **ಉಚ್ಯತೇ**=ಸರ್ವೌಷಧವೆಂದು ಹೇಳಲ್ಪಡುತ್ತದೆ. **ಅನ್ನಾತ್** = ಅನ್ನದಿಂದ **ಭೂತಾನಿ** = ಪ್ರಾಣಿಗಳು **ಜಾಯಂತೇ** = ಹುಟ್ಟುತ್ತವೆ; **ಜಾತಾನಿ** = ಹುಟ್ಟಿದವು **ಅನ್ನೇನ** = ಅನ್ನದಿಂದ **ವರ್ಧಂತೇ** = ವರ್ಧಿಸುತ್ತವೆ; **ಅದ್ಯತೇ** = ತಿನ್ನಲ್ಪಡುತ್ತದೆ **ಚ** = ಮತ್ತು **ಭೂತಾನಿ** = ಪ್ರಾಣಿಗಳನ್ನು **ಅತ್ತಿ** = ತಿನ್ನುತ್ತದೆ; **ತಸ್ಮಾತ್** = ಆದುದರಿಂದ **ತತ್** = ಅದು **ಅನ್ನಂ ಉಚ್ಯತೇ** = ಅನ್ನವೆಂದು ಕರೆಯಲ್ಪಡುತ್ತದೆ. **ಇತಿ** = ಎಂದು.

ಯಾವ ಯಾವ ಪ್ರಾಣಿಗಳು ಭೂಮಿಯನ್ನು ಆಶ್ರಯಿಸಿರುವುವೊ (ಅವೆಲ್ಲವೂ) ಅನ್ನದಿಂದಲೇ ಹುಟ್ಟುತ್ತವೆ; ಹಾಗೆಯೇ ಅನ್ನದಿಂದಲೇ ಜೀವಿಸುತ್ತವೆ ಮತ್ತು ಕೊನೆಯಲ್ಲಿ ಇದನ್ನೇ ಪ್ರವೇಶಿಸುತ್ತವೆ. ಅನ್ನವೇ ಪ್ರಾಣಿಗಳಲ್ಲಿ ಜ್ಯೇಷ್ಠವಲ್ಲವೆ? ಆದುದರಿಂದ (ಅನ್ನವು) ಸರ್ವೌಷಧವೆಂದು[೧] ಹೇಳಲ್ಪಡುತ್ತದೆ. ಯಾರು ಅನ್ನವನ್ನು ಬ್ರಹ್ಮವೆಂದು ಉಪಾಸಿಸುತ್ತಾರೆಯೊ[೨] ಅವರು ಅನ್ನವೆಲ್ಲವನ್ನು ಹೊಂದುತ್ತಾರೆ. ಅನ್ನವೇ ಭೂತಗಳಲ್ಲಿ ಜ್ಯೇಷ್ಠವಲ್ಲವೆ? ಆದುದರಿಂದ (ಅನ್ನವು) ಸರ್ವೌಷಧವೆಂದು ಹೇಳಲ್ಪಡುತ್ತದೆ. ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ; ಹುಟ್ಟಿದವು ಅನ್ನದಿಂದ ವರ್ಧಿಸುತ್ತವೆ; ತಿನ್ನಲ್ಪಡುತ್ತದೆ ಮತ್ತು ಪ್ರಾಣಿಗಳನ್ನು ತಿನ್ನುತ್ತದೆ; ಆದುದರಿಂದ ಅದು ಅನ್ನವೆಂದು[೩] ಕರೆಯಲ್ಪಡುತ್ತದೆ.

[೧ ಸರ್ವಪ್ರಾಣಿಗಳ ದೇಹದಾಹವನ್ನು ಹೋಗಲಾಡಿಸುವುದರಿಂದ.

೨ 'ನಾನು ಅನ್ನದಿಂದ ಹುಟ್ಟಿರುತ್ತೇನೆ; ನಾನು ಅನ್ನಸ್ವರೂಪನಾಗಿ ಅನ್ನದಲ್ಲೇ ಲಯವನ್ನು ಹೊಂದುತ್ತೇನೆ; ಆದುದರಿಂದ ಅನ್ನವು ಬ್ರಹ್ಮ' ಎಂಬ ಉಪಾಸನೆ.

೩ ಇದು ಅನ್ನಶಬ್ದದ ನಿರ್ವಚನ. ಪ್ರಾಣಿಗಳಿಂದ ಅನುಭವಿಸಲ್ಪಡುವುದರಿಂದಲೂ ಪ್ರಾಣಿಗಳನ್ನು ಅನುಭವಿಸುತ್ತಿರುವುದರಿಂದಲೂ ಅದು ಅನ್ನ ಎಂದು ಹೇಳಲ್ಪಡುತ್ತದೆ.]

**ತಸ್ಮಾತ್ ವೈ ಏತಸ್ಮಾತ್ ಅನ್ನರಸಮಯಾತ್** [ಪಿಂಡಾತ್] = ಅಂತಹ ಈ ಅನ್ನರಸಮಯವಾದ ಆತ್ಮನಿಗಿಂತಲೂ **ಅನ್ಯಃ** = ಬೇರೆಯವನಾದ **ಅಂತರಃ** = ಒಳಗಿರುವವನಾದ **ಪ್ರಾಣಮಯಃ** = ಪ್ರಾಣಮಯನಾದ **ಆತ್ಮಾ**=ಆತ್ಮನು [ಅಸ್ತಿ = ಇರುವನು]. **ತೇನ** = ಪ್ರಾಣಮಯನಾದ ಆತ್ಮನಿಂದ **ಏಷಃ** = ಈ ಅನ್ನರಸಮಯನಾದ ಆತ್ಮನು **ಪೂರ್ಣಃ**=ತುಂಬಿರುವನು. **ಸಃ ವೈ ಏಷಃ**=ಆ ಇವನು **ಪುರುಷವಿಧಃ ಏವ** = ಪುರುಷಾಕಾರನಾಗಿಯೇ [ಇರುವನು]. **ತಸ್ಯ** = ಆ ಅನ್ನರಸಮಯಪುರುಷನ **ಪುರುಷವಿಧತಾಂ ಅನು** = ಪುರುಷಾಕಾರವನ್ನು ಅನುಸರಿಸಿ **ಅಯಂ** = ಇವನು **ಪುರುಷವಿಧಃ** = ಪುರುಷಾಕಾರನಾಗಿರುತ್ತಾನೆ. **ತಸ್ಯ** = ಅವನಿಗೆ **ಪ್ರಾಣಃ ಏವ** = ಪ್ರಾಣವೇ **ಶಿರಃ** = ತಲೆ; **ವ್ಯಾನಃ** = ವ್ಯಾನವು **ದಕ್ಷಿಣಃ ಪಕ್ಷಃ** = ದಕ್ಷಿಣ ಪಕ್ಷವು;

**ಅಪಾನಃ** = ಅಪಾನವು **ಉತ್ತರಃ ಪಕ್ಷಃ** = ಉತ್ತರ ಪಕ್ಷವು; **ಆಕಾಶಃ** = ಸಮಾನ ವಾಯುವು **ಆತ್ಮಾ** = ದೇಹದ ಮಧ್ಯಭಾಗ; **ಪೃಥಿವೀ** = ಪೃಥಿವೀದೇವತೆಯು **ಪುಚ್ಛಂ ಪ್ರತಿಷ್ಠಾ** = ಪುಚ್ಛ ಮತ್ತು ಪ್ರತಿಷ್ಠೆ. **ತತ್ ಅಪಿ ಏಷಃ ಶ್ಲೋಕಃ ಭವತಿ** = ಆ ವಿಷಯದಲ್ಲಿ ಈ ಶ್ಲೋಕವಿರುವುದು.

ಅಂತಹ ಈ ಅನ್ನರಸಮಯನಾದ ಆತ್ಮನಿಗಿಂತ[೧] ಬೇರೆಯವನೂ, ಒಳಗಿರುವವನೂ, ಪ್ರಾಣಮಯನೂ, ಆದ ಆತ್ಮನಿರುವನು.[೨] ಪ್ರಾಣಮಯ ನಾದ[೩] ಆತ್ಮನಿಂದ ಈ ಅನ್ನರಸಮಯನಾದ ಆತ್ಮನು ತುಂಬಿರುವನು. ಆ ಇವನು[೪] ಪುರುಷಾಕಾರನಾಗಿಯೇ ಇರುವನು. ಆ ಅನ್ನರಸಮಯನ ಪುರುಷಾ ಕಾರವನ್ನು ಅನುಸರಿಸಿ ಇವನು ಪುರುಷಾಕಾರನಾಗಿರುತ್ತಾನೆ.[೫] ಅವನಿಗೆ ಪ್ರಾಣವೇ ತಲೆ, ವ್ಯಾನವು ದಕ್ಷಿಣ ಪಕ್ಷ, ಅಪಾನವು ಉತ್ತರ ಪಕ್ಷ, ಸಮಾನ ವಾಯುವು ದೇಹದ ಮಧ್ಯಭಾಗ, ಪೃಥಿವೀದೇವತೆಯು[೬] ಪುಚ್ಛ ಮತ್ತು ಪ್ರತಿಷ್ಠೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.[೭]

[ಹಿಂದಿನ ಮಂತ್ರದಲ್ಲಿ ಅನ್ನರಸಮಯನಾದ ಆತ್ಮನನ್ನು ಹೇಳಿದ್ದಾಯಿತು. ಇವನಿಗೆ ನಿಜವಾದ ಅಂಗಗಳುಂಟು. ಆದರೆ ಇನ್ನು ಮುಂದೆ ಬರುವ ಪ್ರಾಣಮಯನೇ ಮೊದಲಾದ ಆತ್ಮರಿಗೆ ತಲೆ ಮೊದಲಾದುವುಗಳನ್ನು ಕಲ್ಪಿಸಿ ರೂಪಕವನ್ನು ಸಿದ್ಧಿಸಿದೆ. ಅನ್ನಮಯದಿಂದ ಹಿಡಿದು ಆನಂದಮಯನ ವರೆಗೆ ಇರುವ ಕೋಶಗಳಿಗಿಂತ ತೀರಾ ಒಳಗೆ ಬ್ರಹ್ಮವು ಪ್ರತ್ಯಗಾತ್ಮರೂಪದಿಂದ ಇದೆ. ಅವಿದ್ಯಾಕಲ್ಪಿತವಾದ ಈ ಪಂಚ ಕೋಶಗಳನ್ನು ತೆಗೆದುಹಾಕಿ ಒಳಗಿರುವ ಬ್ರಹ್ಮವನ್ನು ತಿಳಿದುಕೊಳ್ಳಬೇಕು.

[೧] ಶರೀರಕ್ಕಿಂತಲೂ.

[೨] ಶರೀರದಂತೆಯೇ ಆತ್ಮನೆಂದು ಮಿಥ್ಯೆಯಿಂದ ಕಲ್ಪಿಸಲ್ಪಟ್ಟಿರುವನು.

[೩] ಪ್ರಾಣ ಎಂದರೆ ವಾಯು. ವಾಯುಮಯನಾಗಿರುವನು ಎಂದರ್ಥ.

[೪] ಪ್ರಾಣಮಯನಾದ ಆತ್ಮ.

[೫] ಸ್ವತಂತ್ರವಾಗಿ ಪುರುಷಾಕಾರವನ್ನು ಹೊಂದಿಲ್ಲ. ಮೂಸೆಯಲ್ಲಿ ಕರಗಿದ ಲೋಹ ವನ್ನು ಸುರಿದರೆ ಅದು ಪ್ರತಿಮಾಕಾರವನ್ನು ಹೊಂದುವಂತೆ ಪ್ರಾಣಮಯನು ಅನ್ನ ಮಯನನ್ನು ಅನುಸರಿಸಿ ಆ ಆಕಾರವನ್ನು ಹೊಂದಿರುತ್ತಾನೆ. ಇದೇ ರೀತಿಯಲ್ಲಿ ಹಿಂದಿನ ಪುರುಷಾಕಾರವನ್ನು ಅನುಸರಿಸಿ ಮುಂದು ಮುಂದಿನ ಆತ್ಮನು (ಕೋಶವು) ಪುರುಷಾಕಾರವನ್ನು ಹೊಂದಿರುತ್ತಾನೆ; ಮತ್ತು ಹಿಂದು ಹಿಂದಿನ ಆತ್ಮನು ಮುಂದೆ ಬರುವ ಆತ್ಮನಿಂದ ಪೂರ್ಣನಾಗಿರುತ್ತಾನೆ.

[೬] ಇದು ಆಧ್ಯಾತ್ಮಿಕಪ್ರಾಣವನ್ನು ಹಿಡಿದಿಟ್ಟಿದೆ. ಆದುದರಿಂದ ಪೃಥಿವಿಯು ಪ್ರಾಣಮಯ ಆತ್ಮನನ್ನು ಧರಿಸಿದೆ. ಇಲ್ಲದಿದ್ದರೆ ಉದಾನವೃತ್ತಿಯಿಂದ ಶರೀರವು ಮೇಲಕ್ಕೆ ಹೋಗಬಹುದಾಗಿತ್ತು ಅಥವಾ ಭಾರದಿಂದ ಕೆಳಕ್ಕೆ ಬೀಳಬಹುದಾಗಿತ್ತು.

[೭] ಪ್ರಾಣಮಯನಾದ ಆತ್ಮನನ್ನು ಕುರಿತು.]

## ಮೂರನೆಯ ಅನುವಾಕ



ಪ್ರಾಣಂ ದೇವಾ ಅನು ಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾ-ಯುಷಮುಚ್ಯತೇ । ಸರ್ವಮೇವ ತ ಆಯುರ್ಯಂತಿ । ಯೇ ಪ್ರಾಣಂ ಬ್ರಹ್ಮೋಪಾಸತೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷಮುಚ್ಯತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾತ್ ಪ್ರಾಣಮಯಾತ್ । ಅನ್ಯೋಽಂತರ ಆತ್ಮಾ ಮನೋಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ಇತಿ ತೃತಿಯೋಽನು-ವಾಕಃ ॥

ಯೇ = ಯಾವ ದೇವಾಃ = ದೇವತೆಗಳು ಮನುಷ್ಯಾಃ = ಮನುಷ್ಯರು ಪಶವಃ ಚ = ಪಶುಗಳು [ಸಂತಿ = ಇರುವುವೊ, ತೇ ಸರ್ವೇ = ಅವೆಲ್ಲವೂ] ಪ್ರಾಣಂ ಅನು = ಪ್ರಾಣವನ್ನು ಅನುಸರಿಸಿ ಪ್ರಾಣಂತಿ = ಜೀವಿಸುತ್ತಿವೆ. ಪ್ರಾಣಃ ಹಿ = ಪ್ರಾಣವೇ ಭೂತಾನಾಂ = ಪ್ರಾಣಿಗಳ ಆಯುಃ = ಆಯುಸ್ಸು; ತಸ್ಮಾತ್ = ಆದುದರಿಂದ [ಪ್ರಾಣವು] ಸರ್ವಾಯುಷಂ ಇತಿ = ಎಲ್ಲರ ಆಯುಸ್ಸು ಎಂದು ಉಚ್ಯತೇ = ಹೇಳಲ್ಪಡುತ್ತದೆ. ಯೇ = ಯಾರು ಪ್ರಾಣಂ = ಪ್ರಾಣವನ್ನು ಬ್ರಹ್ಮ = ಬ್ರಹ್ಮವೆಂದು ಉಪಾಸತೇ = ಉಪಾಸನೆಮಾಡುವರೊ ತೇ = ಅವರು ಸರ್ವಂ ಏವ ಆಯುಃ = ಪೂರ್ಣಾಯುಸ್ಸನ್ನು ಯಂತಿ=ಹೊಂದುತ್ತಾರೆ. ಪ್ರಾಣಃ ಹಿ ಭೂತಾನಾಂ ಆಯುಃ; ತಸ್ಮಾತ್ ಸರ್ವಾಯುಷಂ ಉಚ್ಯತೇ ಇತಿ [ಅರ್ಥ ಹಿಂದಿನಂತೆಯೆ]. ತಸ್ಯ ಪೂರ್ವಸ್ಯ = ಆ ಹಿಂದಿನ ಅನ್ನಮಯನಿಗೆ ಯಃ = ಯಾವನು ಶಾರೀರಃ ಆತ್ಮಾ = ಶರೀರದಲ್ಲಿರುವ ಆತ್ಮನೊ [ಸಃ = ಅವನು] ಏಷಃ ಏವ = ಇವನೇ. ತಸ್ಮಾತ್ ವೈ

**ಏತಸ್ಮಾತ್ ಪ್ರಾಣಮಯಾತ್** [**ಆತ್ಮನಃ**]=ಅಂತಹ ಈ ಪ್ರಾಣಮಯನಾದ ಆತ್ಮನಿಗಿಂತಲೂ **ಅನ್ಯಃ**=ಬೇರೆಯವನಾದ **ಅಂತರಃ**=ಒಳಗಿರುವವನಾದ **ಮನೋಮಯಃ**=ಮನೋಮಯನಾದ **ಆತ್ಮಾ**=ಆತ್ಮನು [**ಅಸ್ತಿ**=ಇರುವನು]. **ತೇನ**=ಮನೋಮಯನಾದ ಆತ್ಮನಿಂದ **ಏಷಃ**=ಈ ಪ್ರಾಣಮಯನಾದ ಆತ್ಮನು **ಪೂರ್ಣಃ**=ತುಂಬಿರುವನು. **ಸಃ ವೈ ಏಷಃ**=ಆ ಇವನು **ಪುರುಷವಿಧಃ ಏವ**=ಪುರುಷಾಕಾರನಾಗಿಯೇ [ಇರುವನು]. **ತಸ್ಯ**=ಆ ಪ್ರಾಣಮಯನ **ಪುರುಷವಿಧತಾಂ ಅನು**=ಪುರುಷಾಕಾರವನ್ನು ಅನುಸರಿಸಿ **ಅಯಂ**=ಇವನು **ಪುರುಷವಿಧಃ**=ಪುರುಷಾಕಾರನಾಗಿರುತ್ತಾನೆ. **ತಸ್ಯ ಯಜುಃ ಏವ ಶಿರಃ**=ಅವನಿಗೆ ಯಜುಸ್ಸೇ ತಲೆ; **ಋಕ್ ದಕ್ಷಿಣಃ ಪಕ್ಷಃ**=ಋಕ್ಕು ದಕ್ಷಿಣ ಪಕ್ಷವು; **ಸಾಮ ಉತ್ತರಃ ಪಕ್ಷಃ**=ಸಾಮವು ಉತ್ತರ ಪಕ್ಷವು; **ಆದೇಶಃ ಆತ್ಮಾ**=ಆದೇಶವು ಮಧ್ಯಭಾಗ; **ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ**=ಅಥರ್ವವೇದವು ಪುಚ್ಛ ಮತ್ತು ಪ್ರತಿಷ್ಠೆ. **ತತ್ ಅಪಿ ಏಷಃ ಶ್ಲೋಕಃ ಭವತಿ**=ಆ ವಿಷಯದಲ್ಲಿ ಈ ಶ್ಲೋಕವಿರುವುದು.

ಪ್ರಾಣವನ್ನು[೧] ಅನುಸರಿಸಿ[೨] ದೇವತೆಗಳು[೩] ಜೀವಿಸಿರುವರು. (ಹಾಗೆಯೇ) ಎಲ್ಲ ಮನುಷ್ಯರೂ ಪಶುಗಳೂ ಜೀವಿಸಿರುವುವು. ಪ್ರಾಣವೇ ಪ್ರಾಣಿಗಳಿಗೆ ಆಯುಸ್ಸು; ಆದುದರಿಂದ (ಪ್ರಾಣವು) ಎಲ್ಲರ ಆಯುಸ್ಸು ಎಂದು ಹೇಳಲ್ಪಡುತ್ತದೆ. ಯಾರು ಪ್ರಾಣವನ್ನು ಬ್ರಹ್ಮವೆಂದು ಉಪಾಸಿಸುವರೋ ಅವರು ಪೂರ್ಣಾಯುಸ್ಸನ್ನು ಹೊಂದುತ್ತಾರೆ.[೪] ಪ್ರಾಣವೇ ಪ್ರಾಣಿಗಳ ಆಯುಸ್ಸು. ಆದುದರಿಂದ (ಪ್ರಾಣವು) ಎಲ್ಲರ ಆಯುಸ್ಸು ಎಂದು ಹೇಳಲ್ಪಡುತ್ತದೆ. ಆ ಹಿಂದಿನ ಅನ್ನಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೊ ಅವನು ಇವನೇ. ಅಂತಹ ಈ ಪ್ರಾಣಮಯನಾದ ಆತ್ಮನಿಗಿಂತ ಬೇರೆಯವನೂ, ಒಳಗಿರುವವನೂ, ಮನೋಮಯನೂ[೫] ಆದ ಆತ್ಮನಿರುವನು. ಮನೋಮಯನಾದ ಆತ್ಮನಿಂದ ಈ ಪ್ರಾಣಮಯನಾದ ಆತ್ಮನು ತುಂಬಿರುವನು. ಆ ಇವನು ಪುರುಷಾಕಾರನಾಗಿಯೇ ಇರುವನು. ಆ ಪ್ರಾಣಮಯನ ಪುರುಷಾಕಾರವನ್ನು ಅನುಸರಿಸಿ ಇವನು ಪುರುಷಾಕಾರನಾಗಿರುತ್ತಾನೆ. ಅವನಿಗೆ ಯಜುಸ್ಸೇ ತಲೆ,[೬] ಋಕ್ಕು ದಕ್ಷಿಣ ಪಕ್ಷ, ಸಾಮವು ಉತ್ತರ ಪಕ್ಷ, ಆದೇಶವು[೭] ಮಧ್ಯಭಾಗ, ಅಥರ್ವವೇದವು[೮] ಪುಚ್ಛ ಮತ್ತು ಪ್ರತಿಷ್ಠೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.[೯]

[೧ ಪ್ರಾಣನಶಕ್ತಿಯುಳ್ಳ ವಾಯ್ವಾತ್ಮನನ್ನು.
೨ ಅವನ ಆತ್ಮಭೂತರಾಗಿ.
೩ ಅಗ್ನಿಯೇ ಮೊದಲಾದವರು ಅಥವಾ ಇಂದ್ರಿಯಗಳು.

[೪] ಯಾರು ಯಾವ ಗುಣಯುಕ್ತವಾದ ಬ್ರಹ್ಮವನ್ನು ಉಪಾಸಿಸುವರೊ ಅವರು ಆ ಗುಣವನ್ನು ಹೊಂದುವರು.

[೫] ಸಂಕಲ್ಪಾದಿರೂಪದಲ್ಲಿರುವ ಅಂತಃಕರಣಕ್ಕೆ ಮನಸ್ಸು ಎಂದು ಹೆಸರು; ತನ್ಮಯನಾಗಿರುವವನು ಮನೋಮಯನು. ಇವನು ಪ್ರಾಣಮಯನ ಆತ್ಮ.

[೬] ಯಜುಸ್ಸಿನ ಪ್ರಾಧಾನ್ಯವನ್ನು ತಿಳಿಸಲು ಅದನ್ನು ತಲೆಯೆಂದು ಹೇಳಿದೆ. ಯಜುಸ್ಸೆಂದರೆ ಮನಸ್ಸಿನ ಒಂದು ವೃತ್ತಿ—ಎಂದರೆ ಕಂಠಾದಿಸ್ಥಾನ, ಪ್ರಯತ್ನ, ನಾದ, ಸ್ವರ ಇವುಗಳ ಮೂಲಕ ಉಚ್ಚರಿಸಲ್ಪಡುವ ವರ್ಣ-ಪದ-ವಾಕ್ಯಗಳ ಭಾವನೆ. ಈ ಭಾವನೆಯೇ ಶ್ರೋತ್ರಾದಿಕರಣಗಳ ದ್ವಾರಾ ವ್ಯಕ್ತವಾಗಿ ಯಜುಸ್ಸು ಎನಿಸುವುದು. ಹೀಗೆಯೇ ಋಕ್ಸಾಮಗಳನ್ನು ತಿಳಿಯಬೇಕು. ಮಂತ್ರಗಳು ಮನಸ್ಸಿನ ವೃತ್ತಿಗಳಾಗಿರುವುದರಿಂದ ಅವುಗಳನ್ನು ಜಪಿಸಲು ಸಾಧ್ಯ.

[೭] ಇಲ್ಲಿ 'ಆದೇಶ' ಎಂದರೆ ಬ್ರಾಹ್ಮಣಭಾಗ ಎಂದರ್ಥ.

[೮] ಅಥರ್ವನೂ ಅಂಗಿರಸ್ಸೂ ಕಂಡುಹಿಡಿದ ಮಂತ್ರಗಳು ಮತ್ತು ಬ್ರಾಹ್ಮಣವು.

[೯] ಮನೋಮಯನನ್ನು ಪ್ರಕಾಶಿಸುವ].

## ನಾಲ್ಕನೆಯ ಅನುವಾಕ

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂತರ ಆತ್ಮಾ ವಿಜ್ಞಾನ-ಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ । ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥**

**ಇತಿ ಚತುರ್ಥೋಽನುವಾಕಃ ॥**

ಯತಃ = ಯಾವುದರಿಂದ ವಾಚಃ = ವಾಕ್ಕುಗಳು ಮನಸಾ ಸಹ = ಮನಸ್ಸಿನೊಂದಿಗೆ ಅಪ್ರಾಪ್ಯ = [ಅದನ್ನು] ಹೊಂದಲಾರದೆ ನಿವರ್ತಂತೇ = ಹಿಂತಿರುಗುವುವೊ ಬ್ರಹ್ಮಣಃ = [ಆ] ಬ್ರಹ್ಮದ ಆನಂದಂ = ಆನಂದವನ್ನು ವಿದ್ವಾನ್ = ತಿಳಿದವನು ಕದಾಚನ = ಎಂದಿಗೂ ನ ಬಿಭೇತಿ = ಹೆದರುವುದಿಲ್ಲ, ಇತಿ = ಎಂದು.

ಯಾವುದರಿಂದ ವಾಕ್ಕುಗಳು ಮನಸ್ಸಿನೊಂದಿಗೆ (ಅದನ್ನು) ಹೊಂದಲಾರದೆ ಹಿಂತಿರುಗುವುವೊ ಆ ಬ್ರಹ್ಮದ ಆನಂದವನ್ನು ತಿಳಿದುಕೊಂಡವನು ಎಂದಿಗೂ ಹೆದರುವುದಿಲ್ಲ.

ತಸ್ಯ ಪೂರ್ವಸ್ಯ ಯಃ ಶಾರೀರಃ ಆತ್ಮಾ [ಸಃ] ಏಷಃ ಏವ. ತಸ್ಮಾತ್ ವೈ ಏತಸ್ಮಾತ್ ಮನೋಮಯಾತ್ ಅನ್ಯಃ ಅಂತರಃ ಆತ್ಮಾ ವಿಜ್ಞಾನಮಯಃ. ತೇನ ಏಷಃ ಪೂರ್ಣಃ. ಸಃ ವೈ ಏಷಃ ಪುರುಷವಿಧಃ ಏವ. ತಸ್ಯ ಪುರುಷವಿಧತಾಂ ಅನು ಅಯಂ ಪುರುಷವಿಧಃ. ಶ್ರದ್ಧಾ ಏವ ತಸ್ಯ ಶಿರಃ; ಋತಂ ದಕ್ಷಿಣಃ ಪಕ್ಷಃ; ಸತ್ಯಂ ಉತ್ತರಃ ಪಕ್ಷಃ; ಯೋಗಃ ಆತ್ಮಾ; ಮಹಃ ಪುಚ್ಛಂ ಪ್ರತಿಷ್ಠಾ. ತತ್ ಅಪಿ ಏಷಃ ಶ್ಲೋಕಃ ಭವತಿ.

ಆ ಹಿಂದಿನ ಪ್ರಾಣಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೊ ಅವನು ಇವನೇ. ಅಂತಹ ಈ ಮನೋಮಯನಾದ ಆತ್ಮನಿಗಿಂತ

ಬೇರೆಯವನೂ, ಒಳಗಿರುವವನೂ, ವಿಜ್ಞಾನಮಯನೂ[೧] ಆದ ಆತ್ಮನಿರುವನು. ವಿಜ್ಞಾನಮಯನಾದ ಆತ್ಮನಿಂದ ಈ ಮನೋಮಯನಾದ ಆತ್ಮನು ತುಂಬಿರುವನು. ಆ ಇವನು ಪುರುಷಾಕಾರನಾಗಿಯೇ ಇರುವನು. ಆ ಮನೋಮಯನ ಪುರುಷಾಕಾರವನ್ನು ಅನುಸರಿಸಿ ಇವನು ಪುರುಷಾಕಾರನಾಗಿರುತ್ತಾನೆ. ಅವನಿಗೆ ಶ್ರದ್ಧೆಯೇ ತಲೆ,[೨] ಋತವು ದಕ್ಷಿಣ ಪಕ್ಷ, ಸತ್ಯವು ಉತ್ತರ ಪಕ್ಷ, ಯೋಗವು[೩] ಮಧ್ಯಭಾಗ, ಮಹತ್ತತ್ತ್ವವು ಪುಚ್ಛ[೪] ಮತ್ತು ಪ್ರತಿಷ್ಠೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.[೫]

[[೧] ವೇದಾರ್ಥವಿಷಯದಲ್ಲಿ ಉತ್ಪನ್ನವಾಗುವ ನಿಶ್ಚಯಾತ್ಮಕವಾದ ಬುದ್ಧಿಗೆ ವಿಜ್ಞಾನವೆಂದು ಹೆಸರು. ಅಧ್ಯವಸಾಯಲಕ್ಷಣವುಳ್ಳ ಈ ವಿಜ್ಞಾನವು ಅಂತಃಕರಣದ ಧರ್ಮವಾಗಿರುತ್ತದೆ. ಪ್ರಮಾಣಸ್ವರೂಪವಾದ ನಿಶ್ಚಯವಿಜ್ಞಾನಗಳಿಂದ ಉತ್ಪನ್ನನಾಗಿರುವ ಆತ್ಮನು ವಿಜ್ಞಾನಮಯನು. ಇವನು ಮನೋಮಯನ ಆತ್ಮ.

[೨] ವೇದಾರ್ಥದಲ್ಲಿ ನಿಶ್ಚಯವಾದ ಜ್ಞಾನವನ್ನು ಹೊಂದಿದವನಿಗೆ ಕರ್ತವ್ಯವಿಷಯಗಳಲ್ಲಿ ಶ್ರದ್ಧೆಯುಂಟಾಗುತ್ತದೆ. ಶ್ರದ್ಧೆಯು ಸರ್ವಕರ್ತವ್ಯಗಳಲ್ಲಿ ಪ್ರಥಮವಾದುದರಿಂದ ವಿಜ್ಞಾನಮಯನ ಶಿರಸ್ಸೆಂದು ಹೇಳಿದೆ.

[೩] ಸೇರಿಸುವಿಕೆ ಅಥವಾ ಸಮಾಧಾನ. ಮನುಷ್ಯನು ಸಮಾಧಿಯನ್ನು ಹೊಂದಿರುವಾಗ ಶ್ರದ್ಧಾದಿಗಳು ತತ್ತ್ವವನ್ನು ಅರಿತುಕೊಳ್ಳಲು ಸಹಾಯಕವಾಗಿರುತ್ತವೆ. ಆದುದರಿಂದ ಸಮಾಧಿರೂಪವಾದ ಯೋಗವು ವಿಜ್ಞಾನಮಯನ ಆತ್ಮ.

[೪] ಬುದ್ಧಿಯ ಎಲ್ಲ ವಿಜ್ಞಾನಗಳಿಗೂ ಮಹತ್ತತ್ತ್ವವು ಕಾರಣವಾಗಿರುವುದರಿಂದ ವಿಜ್ಞಾನಮಯನಿಗೆ ಪ್ರತಿಷ್ಠೆಯಾಗಿರುತ್ತದೆ.

[೫] ವಿಜ್ಞಾನಮಯನನ್ನು ತಿಳಿಸುವ.]

## ಐದನೆಯ ಅನುವಾಕ

ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ ಸಮಶ್ನುತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾದ್ವಿಜ್ಞಾನ-ಮಯಾತ್ । ಅನ್ಯೋಽಂತರ ಆತ್ಮಾಽನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧ-ತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥

ಇತಿ ಪಂಚಮೋಽನುವಾಕಃ ॥

ವಿಜ್ಞಾನಂ = ವಿಜ್ಞಾನವು ಯಜ್ಞಂ = ಯಜ್ಞವನ್ನು ತನುತೇ = ಮಾಡುತ್ತದೆ, ಕರ್ಮಾಣಿ ಚ ಅಪಿ = ಕರ್ಮಗಳನ್ನೂ ತನುತೇ = ಮಾಡುತ್ತದೆ. ಸರ್ವೇ = ಎಲ್ಲ ದೇವಾಃ = ದೇವತೆಗಳು ವಿಜ್ಞಾನಂ = ವಿಜ್ಞಾನವನ್ನು ಜ್ಯೇಷ್ಠಂ=ಜ್ಯೇಷ್ಠವಾದ ಬ್ರಹ್ಮ= ಬ್ರಹ್ಮವೆಂದು ಉಪಾಸತೇ = ಉಪಾಸನೆಮಾಡುತ್ತಾರೆ. [ಯಃ ಕಶ್ಚಿತ್ = ಯಾವ ನಾದರೂ] ವಿಜ್ಞಾನಂ = ವಿಜ್ಞಾನವನ್ನು ಬ್ರಹ್ಮ = ಬ್ರಹ್ಮವೆಂದು ವೇದ ಚೇತ್ = ಅರಿತುಕೊಂಡರೆ, ತಸ್ಮಾತ್ = ಆ ವಿಜ್ಞಾನಮಯಬ್ರಹ್ಮದಿಂದ ನ ಪ್ರಮಾದ್ಯತಿ ಚೇತ್ = ಪ್ರಮಾದವನ್ನು ಮಾಡದಿದ್ದರೆ, [ಸಃ = ಅವನು] ಶರೀರೇ = ಶರೀರದಲ್ಲಿ ಪಾಪ್ಮನಃ=ಪಾಪಗಳನ್ನು ಹಿತ್ವಾ=ಬಿಟ್ಟು ಸರ್ವಾನ್=ಎಲ್ಲ ಕಾಮಾನ್=ಕಾಮಗಳನ್ನು ಸಮಶ್ನುತೇ = ಹೊಂದುತ್ತಾನೆ ಇತಿ = ಎಂದು. ತಸ್ಯ ಪೂರ್ವಸ್ಯ ಯಃ ಶಾರೀರಃ ಆತ್ಮಾ [ಸಃ] ಏಷಃ ಏವ. ತಸ್ಮಾತ್ ವೈ ಏತಸ್ಮಾತ್ ವಿಜ್ಞಾನಮಯಾತ್ ಅನ್ಯಃ ಅಂತರಃ ಆತ್ಮಾ ಆನಂದಮಯಃ. ತೇನ ಏಷಃ ಪೂರ್ಣಃ. ಸಃ ವೈ ಏಷಃ ಪುರುಷವಿಧಃ ಏವ. ತಸ್ಯ ಪುರುಷವಿಧತಾಂ ಅನು ಅಯಂ ಪುರುಷವಿಧಃ. ಪ್ರಿಯಂ ಏವ ತಸ್ಯ ಶಿರಃ; ಮೋದಃ ದಕ್ಷಿಣಃ ಪಕ್ಷಃ; ಪ್ರಮೋದಃ ಉತ್ತರಃ

**ಪಕ್ಷಃ; ಆನಂದಃ ಆತ್ಮಾ; ಬ್ರಹ್ಮ ಪುಚ್ಛಂ ಪ್ರತಿಷ್ಠಾ. ತತ್ ಅಪಿ ಏಷಃ ಶ್ಲೋಕಃ ಭವತಿ.**

ವಿಜ್ಞಾನವು[೧] ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ. ಎಲ್ಲ ದೇವತೆಗಳು ವಿಜ್ಞಾನವನ್ನು ಜ್ಯೇಷ್ಠವಾದ ಬ್ರಹ್ಮವೆಂದು ಉಪಾಸನೆ ಮಾಡುತ್ತಾರೆ. (ಯಾವನಾದರೂ) ವಿಜ್ಞಾನವನ್ನು ಬ್ರಹ್ಮವೆಂದು ಅರಿತು ಕೊಂಡರೆ—ಆ ವಿಜ್ಞಾನಮಯಬ್ರಹ್ಮದ ವಿಷಯದಲ್ಲಿ ಪ್ರಮಾದವನ್ನು ಮಾಡ ದಿದ್ದರೆ[೨]—(ಅವನು) ಶರೀರದಲ್ಲಿ[೩] ಪಾಪಗಳನ್ನು ಬಿಟ್ಟು ಎಲ್ಲ ಕಾಮಗಳನ್ನು ಹೊಂದುತ್ತಾನೆ. ಆ ಹಿಂದಿನ ಮನೋಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೊ ಅವನು ಇವನೇ. ಅಂತಹ ಈ ವಿಜ್ಞಾನಮಯನಾದ ಆತ್ಮನಿಗಿಂತ ಬೇರೆಯವನೂ, ಒಳಗಿರುವವನೂ, ಆನಂದಮಯನೂ[೪] ಆದ ಆತ್ಮನಿರುವನು. ಆನಂದಮಯನಾದ ಆತ್ಮನಿಂದ ಈ ವಿಜ್ಞಾನಮಯನಾದ ಆತ್ಮನು ತುಂಬಿರು ವನು. ಆ ಇವನು ಪುರುಷಾಕಾರನಾಗಿಯೇ ಇರುವನು. ಆ ವಿಜ್ಞಾನ ಮಯನ ಪುರುಷಾಕಾರವನ್ನು ಅನುಸರಿಸಿ ಇವನೂ ಪುರುಷಾಕಾರನಾಗಿರು ತ್ತಾನೆ. ಅವನಿಗೆ ಪ್ರಿಯವೇ[೫] ತಲೆ, ಮೋದವು[೬] ದಕ್ಷಿಣ ಪಕ್ಷ, ಪ್ರಮೋದವು[೭] ಉತ್ತರ ಪಕ್ಷ, ಆನಂದವು[೮] ಮಧ್ಯಭಾಗ. ಬ್ರಹ್ಮವು[೯] ಪುಚ್ಛ ಮತ್ತು ಪ್ರತಿಷ್ಠೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.

[[೧] ವಿಜ್ಞಾನವುಳ್ಳವನು ಶ್ರದ್ಧಾದಿಪೂರ್ವಕವಾಗಿ ಯಜ್ಞವನ್ನು ಮಾಡುತ್ತಾನೆ.

[೨] ಅನ್ನಮಯಾದಿಗಳಲ್ಲಿ ಆತ್ಮಭಾವವನ್ನು ಬಿಟ್ಟು ಕೇವಲ ವಿಜ್ಞಾನಮಯಬ್ರಹ್ಮದಲ್ಲಿ ಆತ್ಮತ್ವವನ್ನು ಭಾವಿಸುತ್ತಿದ್ದರೆ.

[೩] ಶರೀರಾಭಿಮಾನದಿಂದ ಸಮಸ್ತ ಪಾಪಗಳೂ ಉಂಟಾಗುವುದರಿಂದ.

[೪] ಆನಂದಮಯಾತ್ಮನು ಬ್ರಹ್ಮವಲ್ಲ. ಆನಂದಮಯನನ್ನು ಕಾರ್ಯಾತ್ಮನೆಂದೇ ಅರಿಯಬೇಕು. 'ಮಯಟ್' ಪ್ರತ್ಯಯವನ್ನು 'ಅನ್ನಮಯ' ಎಂಬಂತೆ ವಿಕಾರಾರ್ಥ ದಲ್ಲಿ ಪ್ರಯೋಗಿಸಿದೆ. ಇದಲ್ಲದೆ ಮುಂದೆ 'ಆನಂದಮಯಾತ್ಮನನ್ನು ಉಪಸಂಕ್ರಮಿಸು ತ್ತಾನೆ' ಎಂದು ಹೇಳಿರುವುದರಿಂದ ಆನಂದಮಯನು ಕಾರ್ಯಾತ್ಮನೆಂದೇ ತಿಳಿಯ ಬೇಕು. 'ಆನಂದ' ಎಂದರೆ ಉಪಾಸನೆ (ವಿದ್ಯಾ) ಮತ್ತು ಕರ್ಮ ಇವುಗಳ ಫಲ. ಅದರ ವಿಕಾರವು ಆನಂದಮಯನು.

[೫] ಇಷ್ಟವಸ್ತುಗಳನ್ನು ಕಂಡರೆ ಉಂಟಾಗುವ ಸಂತೋಷ.

[೬] ಇಷ್ಟವಸ್ತುವಿನ ಪ್ರಾಪ್ತಿಯಿಂದ ಉಂಟಾಗುವ ಹರ್ಷ.

[೭] ಮೋದವು ಅಧಿಕವಾದರೆ ಪ್ರಮೋದ.

[೮] ಸಾಮಾನ್ಯಸುಖ.

" ಸತ್ಯಜ್ಞಾನಾನಂದರೂಪವಾದ 'ಬ್ರಹ್ಮವಿದಾಪ್ನೋತಿ ಪರಮ್' ಎಂಬಲ್ಲಿ ಹೇಳಿರುವ ಪರಬ್ರಹ್ಮ. ಈ ಬ್ರಹ್ಮಜ್ಞಾನವನ್ನು ಉಪದೇಶಮಾಡಲು ಅನ್ನಮಯಾದಿಪಂಚಕೋಶಗಳನ್ನು ವಿವರಿಸಿದೆ. ಎಲ್ಲಕ್ಕೂ ಅಂತರತಮವಾದ ಬ್ರಹ್ಮವು ಪಂಚಕೋಶಗಳ ಆತ್ಮವಾಗಿದೆ. ಅವಿದ್ಯಾಕಲ್ಪಿತವಾಗಿರುವ ದ್ವೈತಕ್ಕೆಲ್ಲ ಅವಸಾನವಾಗಿರುವ ಅದ್ವೈತ ಬ್ರಹ್ಮವೇ ಆನಂದಮಯನ ಪುಚ್ಛ ಮತ್ತು ಪ್ರತಿಷ್ಠೆ.]

## ಆರನೆಯ ಅನುವಾಕ

ಅಸನ್ನೇವ ಸ ಭವತಿ । ಅಸದ್ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ವೇದ । ಸಂತಮೇನಂ ತತೋ ವಿದುರಿತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ಅಥಾತೋಽನುಪ್ರಶ್ನಾಃ । ಉತಾವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚನ ಗಚ್ಛತೀ೩ । ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚಿತ್ ಸಮಶ್ನುತಾ೩ ಉ । ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್ಂ ಸರ್ವಮಸೃಜತ । ಯದಿದಂ ಕಿಂ ಚ । ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂ ಚ । ತತ್ ಸತ್ಯಮಿತ್ಯಾಚಕ್ಷತೇ । ತದಪ್ಯೇಷ ಶ್ಲೋಕೋ ಭವತಿ ॥ ಇತಿ ಷಷ್ಠೋಽನುವಾಕಃ ॥

ಬ್ರಹ್ಮ = ಬ್ರಹ್ಮವು ಅಸತ್ ಇತಿ = ಅಸತ್ತೆಂದು ವೇದ ಚೇತ್ = ತಿಳಿದುಕೊಂಡರೆ ಸಃ = ಅವನು ಅಸನ್ ಏವ = ಅಸತ್ತೇ ಭವತಿ = ಆಗುತ್ತಾನೆ. ಬ್ರಹ್ಮ = ಬ್ರಹ್ಮವು ಅಸ್ತಿ ಇತಿ = ಇದೆಯೆಂದು ವೇದ ಚೇತ್ = ತಿಳಿದುಕೊಂಡರೆ, ತತಃ = ಅದರಿಂದ ಏನಂ = ಇವನನ್ನು ಸಂತಂ = ಸತ್ ಎಂದು ವಿದುಃ = ಅರಿಯುವರು, ಇತಿ = ಎಂದು. ತಸ್ಯ ಪೂರ್ವಸ್ಯ ಯಃ ಶಾರೀರಃ ಆತ್ಮಾ [ಸಃ] ಏಷಃ ಏವ.

(ಯಾವನಾದರೂ) ಬ್ರಹ್ಮವು ಅಸತ್ ಎಂದು ತಿಳಿದುಕೊಂಡರೆ ಅವನು ಅಸತ್ ಆಗುತ್ತಾನೆ. ಬ್ರಹ್ಮವು ಇದೆ ಎಂದು ತಿಳಿದುಕೊಂಡರೆ ಅದರಿಂದ ಇವನನ್ನು ಸತ್ ಎಂದು ತಿಳಿಯುವರು. ಆ ಹಿಂದಿನ ವಿಜ್ಞಾನಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೊ ಅವನೇ ಇವನು.

[ಸತ್, ಅಸತ್ ಎಂಬ ಶಬ್ದಗಳಿಗೆ ಇರುವವನು, ಇಲ್ಲದವನು ಎಂದು ಅರ್ಥ. ಯಾವನು ಬ್ರಹ್ಮವು ಅಸತ್ ಎಂದು ತಿಳಿಯುವನೊ ಅವನಿಗೆ ಪುರುಷಾರ್ಥಸಂಬಂಧ ವಿರುವುದಿಲ್ಲ. ಆದರೆ ಯಾವನು ಸರ್ವವಿಕಲ್ಪಾಸ್ಪದವೂ ಸರ್ವಪ್ರವೃತ್ತಿಕಾರಣವೂ ಸರ್ವವಿಶೇಷರಹಿತವೂ ಆದ ಬ್ರಹ್ಮವು ಇದೆ ಎಂದು ತಿಳಿದುಕೊಳ್ಳುವನೊ ಅವನನ್ನು, ಬ್ರಹ್ಮಸ್ವರೂಪದಿಂದ ಪರಮಾರ್ಥಸತ್ಯದ ರೂಪವನ್ನೇ ಪಡೆದವನೆಂದು ಬ್ರಹ್ಮಜ್ಞಾನಿಗಳು ತಿಳಿಯುವರು.

ಆಚಾರ್ಯರ ಎರಡನೆಯ ವ್ಯಾಖ್ಯಾನದ ಪ್ರಕಾರ ಸತ್, ಅಸತ್ ಎಂಬ ಪದ ಗಳಿಗೆ ಸಾಧು, ಅಸಾಧು ಎಂದು ಅರ್ಥವನ್ನು ಮಾಡಿದೆ. ಬ್ರಹ್ಮವು ಅಸತ್ ಎಂದು ತಿಳಿಯುವವನು ಬ್ರಹ್ಮಜ್ಞಾನಕ್ಕಾಗಿ ಇರುವ ವರ್ಣಾಶ್ರಮಾದಿವ್ಯವಸ್ಥೆಯೆಂಬ ಸನ್ಮಾರ್ಗ ದಲ್ಲಿ ಶ್ರದ್ಧೆಯಿಲ್ಲದವನಾಗುವನು. ನಾಸ್ತಿಕನಾದ ಅವನು ಅಸತ್ ಅಥವಾ ಅಸಾಧು ವಾಗುವನು. ಬ್ರಹ್ಮವು ಇದೆ ಎಂದು ತಿಳಿಯುವವನು ವರ್ಣಾಶ್ರಮಾದಿವ್ಯವಸ್ಥೆ ಯೆಂಬ ಸನ್ಮಾರ್ಗದಲ್ಲಿ ಶ್ರದ್ಧೆಯುಳ್ಳವನಾಗಿ ಸಾಧುವಾಗುವನು. ಬ್ರಹ್ಮವು ಇದೆ ಎಂದು ತಿಳಿಯಬೇಕು ಎಂಬುದು ಒಟ್ಟು ವಾಕ್ಯಾರ್ಥ.]

**ಅಥ** = ಇನ್ನು **ಅತಃ** = ಆದುದರಿಂದ **ಅನುಪ್ರಶ್ನಾಃ** = ಅನುಪ್ರಶ್ನೆಗಳು—**ಕಶ್ಚನ ಅವಿದ್ವಾನ್** = ಯಾವನಾದರೂ ಅಜ್ಞಾನಿಯು **ಪ್ರೇತ್ಯ** = ಶರೀರವನ್ನು ಬಿಟ್ಟ ಮೇಲೆ **ಅಮುಂ ಲೋಕಂ** = ಆ ಲೋಕವನ್ನು ಎಂದರೆ ಪರಮಾತ್ಮನನ್ನು **ಉತ ಗಚ್ಛತಿ** = ಹೊಂದುತ್ತಾನೆಯೆ? **ಆಹೋ** = ಅಥವಾ **ಕಶ್ಚಿತ್ ವಿದ್ವಾನ್** = ಯಾವನಾದರೂ ಜ್ಞಾನಿಯು **ಪ್ರೇತ್ಯ** = ಶರೀರವನ್ನು ಬಿಟ್ಟ ಮೇಲೆ **ಅಮುಂ ಲೋಕಂ** = ಪರಮಾತ್ಮನನ್ನು **ಸಮಶ್ನುತೇ ಉ** = ಹೊಂದುತ್ತಾನೆಯೆ?

ಇನ್ನು ಆದುದರಿಂದ ಈ ಅನುಪ್ರಶ್ನೆಗಳು—ಯಾವನಾದರೂ ಅಜ್ಞಾನಿಯು ಶರೀರವನ್ನು ಬಿಟ್ಟ ಮೇಲೆ ಪರಮಾತ್ಮನನ್ನು ಹೊಂದುತ್ತಾನೆಯೆ? ಅಥವಾ ಯಾವನಾದರೂ ಜ್ಞಾನಿಯು ದೇಹತ್ಯಾಗಮಾಡಿದ ಮೇಲೆ ಪರಮಾತ್ಮನನ್ನು ಹೊಂದುತ್ತಾನೆಯೆ?

[ಬ್ರಹ್ಮವು ಎಲ್ಲರಿಗೂ ಸಮಾನವಾಗಿರುವುದರಿಂದ ಅಜ್ಞಾನಿಯೂ ಕೂಡ ಬ್ರಹ್ಮ ವನ್ನು ಹೊಂದುತ್ತಾನೆಯೊ ಅಥವಾ ಇಲ್ಲವೊ? ಒಂದು ವೇಳೆ ಅಜ್ಞಾನಿಗೆ ಬ್ರಹ್ಮ ಪ್ರಾಪ್ತಿಯಾಗದಿದ್ದರೆ ಅವನಂತೆ ಜ್ಞಾನಿಗೂ ಬ್ರಹ್ಮಪ್ರಾಪ್ತಿ ಆಗುವುದಿಲ್ಲವೊ ಅಥವಾ ಆಗುವುದೊ? ಇದು ಶಿಷ್ಯನ ಸಂದೇಹ. ಆದುದರಿಂದ ಅನುಪ್ರಶ್ನೆಗಳು. ಆಚಾರ್ಯರು ಹೇಳಿದ ಮೇಲೆ ಈ ಪ್ರಶ್ನೆಗಳು ಬಂದಿರುವುದರಿಂದ ಇವುಗಳಿಗೆ ಅನುಪ್ರಶ್ನೆಗಳೆಂದು ಹೆಸರು.]

**ಸಃ** = ಆ ಆತ್ಮನು **ಅಕಾಮಯತ** = ಸಂಕಲ್ಪಿಸಿದನು—**ಬಹು ಸ್ಯಾಂ** = ನಾನು ಬಹುವಾಗುವೆನು, **ಪ್ರಜಾಯೇಯ**=ಹುಟ್ಟುವೆನು. **ಸಃ**=ಅವನು **ತಪಃ ಅತಪ್ಯತ**= ತಪಸ್ಸನ್ನು ಮಾಡಿದನು. **ಸಃ** = ಅವನು **ತಪಃ ತಪ್ತ್ವಾ** = ತಪಸ್ಸನ್ನು ಮಾಡಿ **ಇದಂ**

**ಸರ್ವಂ** = ಇದೆಲ್ಲವನ್ನೂ **ಯತ್ ಇದಂ ಕಿಂ ಚ** = ಏನೇನಿದೆಯೊ— **ಅಸೃಜತ** = ಸೃಷ್ಟಿಸಿದನು. **ತತ್** = ಅದನ್ನು **ಸೃಷ್ಟ್ವಾ** = ಸೃಷ್ಟಿಸಿ **ತತ್ ಏವ** = ಅದನ್ನೇ **ಅನುಪ್ರಾವಿಶತ್** = ಪ್ರವೇಶಿಸಿದನು. **ತತ್** = ಅದನ್ನು **ಅನುಪ್ರವಿಶ್ಯ** = ಪ್ರವೇಶಿಸಿ **ಸತ್ ಚ** = ಸತ್ **ತ್ಯತ್ ಚ** = ಮತ್ತು ತ್ಯತ್, **ನಿರುಕ್ತಂ ಚ ಅನಿರುಕ್ತಂ ಚ** = ನಿರುಕ್ತ ಮತ್ತು ಅನಿರುಕ್ತ, **ನಿಲಯನಂ ಚ ಅನಿಲಯನಂ ಚ** = ನಿಲಯನ ಮತ್ತು ಅನಿಲಯನ, **ವಿಜ್ಞಾನಂ ಚ ಅವಿಜ್ಞಾನಂ ಚ** = ವಿಜ್ಞಾನ ಮತ್ತು ಅವಿಜ್ಞಾನ, **ಸತ್ಯಂ ಚ ಅನೃತಂ ಚ** = ಸತ್ಯ ಮತ್ತು ಅನೃತ **ಅಭವತ್**=ಆದನು. **ಯತ್ ಇದಂ ಕಿಂ ಚ** = ಏನೇನಿದೆಯೋ [ಅದೆಲ್ಲವೂ ಆದನು]. **ತತ್** = ಆ ಬ್ರಹ್ಮವು **ಸತ್ಯಂ ಇತಿ** = ಸತ್ಯವೆಂದು **ಆಚಕ್ಷತೇ** = ಹೇಳುತ್ತಾರೆ. **ತತ್ ಅಪಿ ಏಷಃ ಶ್ಲೋಕಃ ಭವತಿ**= ಆ ವಿಷಯದಲ್ಲಿ ಈ ಶ್ಲೋಕವಿರುವುದು.

'ನಾನು ಬಹುವಾಗುವೆನು,[೧] ಹುಟ್ಟುವೆನು' ಎಂದು ಆ ಆತ್ಮನು ಸಂಕಲ್ಪಿಸಿದನು. ಅವನು ತಪಸ್ಸನ್ನು[೨] ಮಾಡಿದನು. ಅವನು ತಪಸ್ಸು ಮಾಡಿದ ಬಳಿಕ ಇದೆಲ್ಲವನ್ನೂ[೩]—ಏನೇನಿದೆಯೊ—ಸೃಷ್ಟಿಸಿದನು. ಅದನ್ನು ಸೃಷ್ಟಿಸಿ ಅದನ್ನೇ ಪ್ರವೇಶಿಸಿದನು.[೪] ಅದನ್ನು ಪ್ರವೇಶಿಸಿ ಸತ್ ಮತ್ತು ತ್ಯತ್,[೫] ನಿರುಕ್ತ ಮತ್ತು ಅನಿರುಕ್ತ,[೬] ನಿಲಯನ ಮತ್ತು ಅನಿಲಯನ,[೭] ವಿಜ್ಞಾನ ಮತ್ತು ಅವಿಜ್ಞಾನ,[೮] ಸತ್ಯ ಮತ್ತು ಅನೃತ—(ಇವೆಲ್ಲವೂ) ಆದನು. ಏನೇನಿದೆಯೊ (ಅದೆಲ್ಲವೂ ಆದನು). ಆ ಬ್ರಹ್ಮವು ಸತ್ಯ[೧೦] ಎಂದು ಹೇಳುತ್ತಾರೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.[೧೧]

['ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬಲ್ಲಿ ಹೇಳಿರುವ ಬ್ರಹ್ಮದ ಸತ್ಯತ್ವವನ್ನು ಉಪದೇಶಿಸಲು ಈ ಭಾಗವು ಆರಂಭವಾಗಿರುತ್ತದೆ. ಜಗತ್ತಿಗೆ ಯಾವ ಅಸದ್ವಸ್ತುವೂ ಕಾರಣವಲ್ಲ, ಬ್ರಹ್ಮವೇ ಜಗತ್ಕಾರಣ. ಇದರಿಂದಲೂ ಬ್ರಹ್ಮದ ಅಸ್ತಿತ್ವವನ್ನು ತಿಳಿಯಬಹುದು. ಬ್ರಹ್ಮವು ಕಾಮಕ್ಕೆ ವಶವಾಗಿಲ್ಲ; 'ಸೋಽಕಾಮಯತ' ಎಂದರೆ ಇಚ್ಛಿಸಿದನು, ಸಂಕಲ್ಪಿಸಿದನು ಎಂದು ತಿಳಿದುಕೊಳ್ಳಬೇಕು. ನಾಮರೂಪಗಳಿಂದ ವಿಭಕ್ತವಾದ ಈ ಜಗತ್ತು ಜೀವರ ಕರ್ಮಫಲಕ್ಕಾಗಿ ಉಂಟಾಗಿದೆಯೇ ವಿನಾ ಪೂರ್ಣಕಾಮನಾದ ಬ್ರಹ್ಮದ ಪ್ರಯೋಜನಕ್ಕಲ್ಲ.

[೧] ಅವಯವವಿಲ್ಲದ ಬ್ರಹ್ಮವು ಬಹುವೂ ಆಗುವುದಿಲ್ಲ, ಅಲ್ಪವೂ ಆಗುವುದಿಲ್ಲ. ಬ್ರಹ್ಮದಲ್ಲಿ ಅಭಿವ್ಯಕ್ತವಾಗದೆ ಇದ್ದ ನಾಮರೂಪಗಳ ವಿಂಗಡವೇ 'ಬಹುವಾಗುವೆನು' ಎಂಬುದರ ಅರ್ಥ.

[೨] 'ಯಸ್ಯ ಜ್ಞಾನಮಯಂ ತಪಃ' (ಮು. ಉ. ೧, ೧, ೯) ಎಂಬಲ್ಲಿ ಹೇಳಿರುವಂತೆ ಜ್ಞಾನವೇ ತಪಸ್ಸು. ಸೃಷ್ಟಿಮಾಡಬೇಕಾಗಿರುವ ಜಗದ್ರಚನಾದಿವಿಷಯವನ್ನು ಆಲೋಚಿಸಿದನು ಎಂದರ್ಥ.

[೩] ದೇಶಕಾಲಗಳಲ್ಲಿ ನಾಮರೂಪಗಳಿಂದ ಅನುಭವಿಸಲ್ಪಡುತ್ತಿರುವ ಜಗತ್ತು.

೪ ಒಬ್ಬ ಮನುಷ್ಯನು ಮನೆಯನ್ನು ಪ್ರವೇಶಿಸುವಂತೆ ಬ್ರಹ್ಮವು ತನ್ನ ಸೃಷ್ಟಿಯನ್ನು ಪ್ರವೇಶಿಸಿತು ಎಂಬುದು ಪ್ರವೇಶಶ್ರುತಿಯ ನಿಜವಾದ ಅರ್ಥವಲ್ಲ. 'ಬ್ರಹ್ಮವಿದಾಪ್ನೋತಿ ಪರಂ . . . ಸತ್ಯಂ ಜ್ಞಾನಮನಂತಂ ಬ್ರಹ್ಮ, ಯೋ ವೇದ ನಿಹಿತಂ ಗುಹಾಯಾಂ' ಎಂದು ಹಿಂದೆ ಹೇಳಿರುವಂತೆ ಬ್ರಹ್ಮಜ್ಞಾನವು ವಿವಕ್ಷಿತವೂ ಪ್ರಕೃತವೂ ಆಗಿದೆ. ಬ್ರಹ್ಮಸ್ವರೂಪವನ್ನು ತಿಳಿಸುವುದಕ್ಕಾಗಿ ಆಕಾಶದಿಂದ ಅನ್ನಮಯದ ವರೆಗೆ ಕಾರ್ಯವನ್ನು ಹೇಳಿದ್ದಾಯಿತು. ಅನಂತರ ಪಂಚಕೋಶಗಳ ಉಪದೇಶ: ಅನ್ನಮಯದ ಒಳಗೆ ಪ್ರಾಣಮಯನಾದ ಆತ್ಮ, ಪ್ರಾಣಮಯನ ಒಳಗೆ ಮನೋಮಯ, ಮನೋಮಯನ ಒಳಗೆ ವಿಜ್ಞಾನಮಯ—ಹೀಗೆ ವಿಜ್ಞಾನಗುಹೆಯಲ್ಲಿ ಬ್ರಹ್ಮದ ಪ್ರವೇಶ; ಮತ್ತು ವಿಜ್ಞಾನಮಯದಲ್ಲಿ ಆನಂದಮಯನು ವಿಶಿಷ್ಟರೂಪದಿಂದ ಇರುತ್ತಾನೆ. ಅನಂತರ ಆನಂದಮಯನೆಂಬ 'ಲಿಂಗವನ್ನು' ಅರಿತುಕೊಳ್ಳುವುದರ ಮೂಲಕ ನಿರ್ವಿಕಲ್ಪವೂ, ಸರ್ವವಿಕಲ್ಪಾಸ್ಪದವೂ, ಆನಂದಮಯನ ಪುಚ್ಛಪ್ರತಿಷ್ಠೆಗಳೂ ಆದ ಬ್ರಹ್ಮವನ್ನು ಗುಹೆಯಲ್ಲಿ ಅರಿತುಕೊಳ್ಳಬೇಕೆಂದು ಹೇಳಿದ್ದಾಯಿತು. ಇದೇ ಬ್ರಹ್ಮದ ನಿಜವಾದ ಪ್ರವೇಶ. ಬ್ರಹ್ಮಕ್ಕೆ ಯಾವ ವಿಶೇಷವೂ ಇಲ್ಲದಿರುವುದರಿಂದ ಅದು ಇನ್ನೆಲ್ಲಿಯೂ ವ್ಯಕ್ತವಾಗುವುದಿಲ್ಲ. ವಿಶೇಷವಸ್ತುವಿನ ಸಂಬಂಧದಿಂದ ನಿರ್ವಿಶೇಷವಸ್ತುವನ್ನು ತಿಳಿಯಬೇಕಾಗಿರುತ್ತದೆ. ಅಂತಃಕರಣವು ಬ್ರಹ್ಮಕ್ಕೆ ಸಮೀಪದಲ್ಲಿರುವುದರಿಂದಲೂ ಪ್ರಕಾಶಾತ್ಮಕವಾಗಿರುವುದರಿಂದಲೂ ಅಂತಃಕರಣ ಗುಹಾಸಂಬಂಧವು ಬ್ರಹ್ಮವನ್ನು ಅರಿತುಕೊಳ್ಳಲು ಕಾರಣವಾಗಿರುತ್ತದೆ. ಆಕಾಶಾದಿ ಕಾರಣವಾಗಿರುವ ಬ್ರಹ್ಮವು ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಿಸಿರುವಂತೆ ಅಂತರ್ಗುಹೆಯಾದ ಬುದ್ಧಿಯಲ್ಲಿ ದ್ರಷ್ಟೃ, ಶ್ರೋತೃ, ಮಂತೃ, ವಿಜ್ಞಾತೃ ಎಂಬ ವಿಶೇಷರೂಪಗಳಲ್ಲಿ ವ್ಯಕ್ತವಾಗುತ್ತದೆ.

೫ ಸತ್ ಎಂದರೆ ಮೂರ್ತ, ಅಸತ್ ಎಂದರೆ ಅಮೂರ್ತ. ಇವು ಆತ್ಮನಲ್ಲಿ ಅವ್ಯಾಕೃತವಾದ ನಾಮರೂಪಗಳಾಗಿದ್ದು ಅಂತರ್ಗತವಾದ ಆತ್ಮನಿಂದ ವ್ಯಾಕೃತವಾಗಿ ಮಾಡಲ್ಪಡುತ್ತವೆ. ಇವು ಆತ್ಮನಿಗಿಂತ ಭಿನ್ನವಾದ ದೇಶಕಾಲಗಳಲ್ಲಿ ಇರುವುದಿಲ್ಲವಾದುದರಿಂದ ಆತ್ಮನೇ ಇವೆರಡೂ ಆಗುತ್ತಾನೆ.

೬ ನಿರುಕ್ತವೆಂದರೆ ಸಮಾನವಾದ ಮತ್ತು ಅಸಮಾನವಾದ ಜಾತಿಯ ಪದಾರ್ಥಗಳಿಂದ ವಿಂಗಡಿಸಲ್ಪಟ್ಟು ದೇಶಕಾಲಗಳಿಂದ ಕೂಡಿ 'ಅದು ಇದು' ಎಂದು ನಿರ್ದೇಶಿಸಲ್ಪಡುವ ವಸ್ತು. ಅನಿರುಕ್ತವು ಇದಕ್ಕೆ ವಿರುದ್ಧವಾದದ್ದು. ಇವು ಮೂರ್ತಾಮೂರ್ತಗಳ ವಿಶೇಷಣಗಳು.

೭ ನಿಲಯನವೆಂದರೆ ಗೂಡು ಅಥವಾ ಆಶ್ರಯ; ಇದು ಮೂರ್ತದ ಧರ್ಮ. ಇದಕ್ಕೆ ವಿರುದ್ಧವಾದುದು ಅನಿಲಯನ; ಇದು ಅಮೂರ್ತದ ಧರ್ಮ. ಇವೆಲ್ಲವೂ ವ್ಯಾಕೃತದ ವಿಶೇಷಣಗಳೆಂದು ತಿಳಿಯಬೇಕು.

೮ ವಿಜ್ಞಾನವೆಂದರೆ ಚೈತನ್ಯವುಳ್ಳವು, ಅವಿಜ್ಞಾನವೆಂದರೆ ಅಚೇತನವಸ್ತುಗಳು.

೯ ಸತ್ಯವೆಂದರೆ ವ್ಯವಹಾರವಿಷಯವಾದ ಸತ್ಯ, ಪರಮಾರ್ಥಸತ್ಯವಲ್ಲ. ಆಪೇಕ್ಷಿಕ ಸತ್ಯಕ್ಕೆ ವಿರುದ್ಧವಾಗಿರುವುದು ಅನೃತ.

[೧೦] ಬ್ರಹ್ಮಕ್ಕಿಂತ ಭಿನ್ನವಾದ ಯಾವ ನಾಮರೂಪಕಾರ್ಯವು ಇಲ್ಲದಿರುವುದರಿಂದ ಅದಕ್ಕೆ 'ಸತ್ಯ' ಎಂದು ಹೆಸರು.

[೧೧] ಸರ್ವಾಂತರತಮನಾದ ಆತ್ಮನು ಇರುವನೆಂಬುದನ್ನು ಕಾರ್ಯದ ದ್ವಾರಾ ತಿಳಿಸುವ ಮಂತ್ರ.]

## ಏಳನೆಯ ಅನುವಾಕ

ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ತದಾತ್ಮಾನಗ್ಂ ಸ್ವಯಮಕುರುತ । ತಸ್ಮಾತ್ ತತ್ ಸುಕೃತಮುಚ್ಯತ ಇತಿ । ಯದ್ವೈ ತತ್ ಸುಕೃತಮ್ । ರಸೋ ವೈ ಸಃ । ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾನಂದಯಾತಿ । ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽ-ನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽ-ಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ ಭಯಂ ವಿದುಷೋಽಮನ್ವಾನಸ್ಯ । ತದಪ್ಯೇಷ ಶ್ಲೋಕೋ ಭವತಿ ॥ ಇತಿ ಸಪ್ತಮೋಽನುವಾಕಃ ॥

ಇದಂ = ಇದು ಅಗ್ರೇ = ಮೊದಲು ಅಸತ್ ವೈ = ಅಸತ್ತೇ ಆಸೀತ್ = ಆಗಿತ್ತು; ತತಃ ವೈ = ಅದರಿಂದಲೇ ಸತ್ = ಸತ್ ಅಜಾಯತ = ಉತ್ಪನ್ನ ವಾಯಿತು. ತತ್ = ಅದು ಆತ್ಮಾನಂ = ತನ್ನನ್ನು ಸ್ವಯಂ ಅಕುರತ = ತಾನೇ ಉತ್ಪತ್ತಿಮಾಡಿಕೊಂಡಿತು. ತಸ್ಮಾತ್=ಆದುದರಿಂದ ತತ್=ಅದು ಸುಕೃತಂ=ಸುಕೃತ ಎಂದು ಉಚ್ಯತೇ = ಹೇಳಲ್ಪಟ್ಟಿದೆ, ಇತಿ = ಎಂದು ಯತ್ ವೈ ತತ್ ಸುಕೃತಂ = ಯಾವುದು ಆ ಸುಕೃತವೊ ಸಃ ವೈ ರಸಃ = ಅದೇ ರಸ. ಅಯಂ=ಇವನು ರಸಂ ಹಿ ಏವ = ರಸವನ್ನೇ ಲಬ್ಧ್ವಾ = ಹೊಂದಿ ಆನಂದೀ ಭವತಿ = ಆನಂದಿಯಾಗುತ್ತಾನೆ. ಆಕಾಶೇ = ಆಕಾಶದಲ್ಲಿ ಏಷಃ = ಈ ಆನಂದಃ = ಆನಂದವು ಯತ್ [ಯದಿ] ನ ಸ್ಯಾತ್ = ಇಲ್ಲದಿದ್ದರೆ ಕಃ ಹಿ ಏವ = ಯಾವನು ತಾನೆ ಅನ್ಯಾತ್ = ಅಪಾನ ವೃತ್ತಿ ಯನ್ನು ಮಾಡುತ್ತಾನೆ? ಕಃ ಪ್ರಾಣ್ಯಾತ್ = ಯಾವನು ಪ್ರಾಣಕ್ರಿಯೆಯನ್ನು ಮಾಡು ವನು? ಏಷಃ ಹಿ ಏವ = ಇವನೇ ಅಲ್ಲವೆ ಆನಂದಯಾತಿ = ಆನಂದಪಡಿಸುವನು? ಯದಾ ಹಿ ಏವ = ಯಾವಾಗ ಏಷಃ = ಈ ಸಾಧಕನು ಏತಸ್ಮಿನ್ = ಈ ಅದೃಶ್ಯೇ = ಅವಿಕಾರವಾದ ಅನಾತ್ಮ್ಯೇ = ಅಶರೀರವಾದ ಅನಿರುಕ್ತೇ = ಅನಿರ್ವಾಚ್ಯವಾದ

**ಅನಿಲಯನೇ**= ಆಧಾರವಿಲ್ಲದ [**ಬ್ರಹ್ಮಣಿ**= ಬ್ರಹ್ಮದಲ್ಲಿ] **ಅಭಯಂ**= ಭಯವಿಲ್ಲದೆ **ಪ್ರತಿಷ್ಠಾಂ**= ಆತ್ಮಭಾವವನ್ನು **ವಿಂದತೇ**= ಹೊಂದುತ್ತಾನೆಯೊ **ಅಥ**= ಆಗ **ಸಃ**= ಅವನು **ಅಭಯಂ ಗತಃ ಭವತಿ**= ಅಭಯವನ್ನು ಪಡೆದವನಾಗುತ್ತಾನೆ. **ಯದಾ ಹಿ ಏವ**= ಯಾವಾಗ **ಏಷಃ**= ಇವನು **ಏತಸ್ಮಿನ್**=ಈ ಬ್ರಹ್ಮದಲ್ಲಿ **ಉತ್ ಅರಂ**= ಸ್ವಲ್ಪವಾದರೂ **ಅಂತರಂ** = ಭೇದದರ್ಶನವನ್ನು **ಕುರುತೇ** = ಮಾಡುತ್ತಾನೆಯೊ **ಅಥ**= ಆಗ, ಅದರಿಂದ **ತಸ್ಯ**= ಅವನಿಗೆ **ಭಯಂ ಭವತಿ**= ಭಯವಾಗುತ್ತದೆ. **ತತ್ ತು ಏವ**= ಅದೇ **ಅಮನ್ವಾನಸ್ಯ** = ಅವಿವೇಕಿಯಾದ **ವಿದುಷಃ** = ವಿದ್ವಾಂಸನಿಗೆ [**ಭಯಂ ಭವತಿ**= ಭಯವಾಗುತ್ತದೆ]. **ತತ್ ಅಪಿ ಏಷಃ ಶ್ಲೋಕಃ ಭವತಿ**= ಆ ವಿಷಯದಲ್ಲಿ ಈ ಶ್ಲೋಕವಿರುತ್ತದೆ.

ಇದು[೧] ಮೊದಲು[೨] ಅಸತ್ತೇ[೩] ಆಗಿತ್ತು. ಅದರಿಂದಲೇ ಸತ್[೪] ಉತ್ಪನ್ನವಾಯಿತು. ಅದು ತನ್ನನ್ನು ತಾನೇ ಉತ್ಪತ್ತಿಮಾಡಿಕೊಂಡಿತು.[೫] ಆದುದರಿಂದ ಅದು ಸುಕೃತವೆನಿಸುತ್ತದೆ.[೬] ಆ ಸುಕೃತವೇ ರಸ.[೭] ರಸವನ್ನೇ ಹೊಂದಿ ಇವನು ಆನಂದಿಯಾಗುತ್ತಾನೆ. ಆಕಾಶದಲ್ಲಿ[೮] ಈ ಆನಂದವು ಇಲ್ಲದಿದ್ದರೆ ಯಾವನು ತಾನೇ ಪ್ರಾಣಕ್ರಿಯೆಯನ್ನಾಗಲಿ ಅಪಾನಕ್ರಿಯೆಯನ್ನಾಗಲಿ ಮಾಡಬಲ್ಲನು? ಇವನೇ ಅಲ್ಲವೆ ಆನಂದಪಡಿಸುವವನು?[೯] ಯಾವಾಗ ಈ ಸಾಧಕನು ಈ ಅವಿಕಾರವೂ[೧೦] ಅಶರೀರವೂ ಅನಿರ್ವಾಚ್ಯವೂ ಆಧಾರರಹಿತವೂ ಆದ ಬ್ರಹ್ಮದಲ್ಲಿ ಭಯವಿಲ್ಲದೆ ಆತ್ಮಭಾವವನ್ನು ಹೊಂದುತ್ತಾನೆಯೊ ಆಗ ಅವನು ಅಭಯವನ್ನು ಪಡೆದವನಾಗುತ್ತಾನೆ.[೧೧] ಯಾವಾಗ ಇವನು ಈ ಬ್ರಹ್ಮದಲ್ಲಿ ಸ್ವಲ್ಪವಾದರೂ ಭೇದದರ್ಶನವನ್ನು ಮಾಡುತ್ತಾನೆಯೊ ಅದರಿಂದ ಅವನಿಗೆ ಭಯವಾಗುತ್ತದೆ. ಅದೇ ಅವಿವೇಕಿಯಾದ ವಿದ್ವಾಂಸನಿಗೆ ಭಯವಾಗುತ್ತದೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.[೧೨]

[[೧] ನಾಮರೂಪಗಳೆಂಬ ವಿಶೇಷವುಳ್ಳ ವ್ಯಾಕೃತವಾದ ಜಗತ್ತು.

[೨] ಸೃಷ್ಟಿಗೆ ಪೂರ್ವದಲ್ಲಿ.

[೩] ಅವಿಕೃತವಾದ ಬ್ರಹ್ಮ; ಇದು ವ್ಯಾಕೃತವಾದ ನಾಮರೂಪಗಳಿಂದ ಕೂಡಿರುವ ಜಗತ್ತಿನಿಂದ ವಿರುದ್ಧವಾದುದು.

[೪] ನಾಮರೂಪಗಳಿಂದ ವ್ಯಾಕೃತವಾದ ಜಗತ್ತು.

[೫] ಅಸತ್-ಶಬ್ದದಿಂದ ಹೇಳಲ್ಪಡುವ ಬ್ರಹ್ಮವು ಸ್ವತಂತ್ರವಾಗಿ ತನ್ನನ್ನು ತಾನೇ ಮಾಡಿಕೊಂಡಿತು. ಆದುದರಿಂದ ಬ್ರಹ್ಮವು ಸುಕೃತ ಎಂದರೆ ಸ್ವಯಂಕರ್ತೃ.

[೬] ಬ್ರಹ್ಮವು ಸರ್ವಕಾರಣವಾಗಿರುವುದರಿಂದ ಸ್ವಯಂಕರ್ತೃ ಎಂದು ಪ್ರಸಿದ್ಧವಾಗಿರುತ್ತದೆ. ಅಥವಾ ಸರ್ವವನ್ನೂ ಸರ್ವಾತ್ಮನಾ ತಾನೇ ಮಾಡಿರುವುದರಿಂದ ಕಾರಣವಾದ ಬ್ರಹ್ಮವು ಪುಣ್ಯರೂಪದಿಂದ ಸುಕೃತ ಎನಿಸಿಕೊಳ್ಳುತ್ತದೆ.

೭ ಬ್ರಹ್ಮವೇ ತೃಪ್ತಿಗೆ ಕಾರಣವಾದ ರಸ.

೮ ಹೃದಯಾಕಾಶದಲ್ಲಿರುವ ಬುದ್ಧಿಯಲ್ಲಿ.

೯ ಪರಮಾತ್ಮನೇ ಅವರವರ ಧರ್ಮಕ್ಕೆ ಅನುಗುಣವಾಗಿ ಜನರನ್ನು ಆನಂದಪಡಿಸುತ್ತಾನೆ; ಎಂದರೆ ಆನಂದರೂಪನಾದ ಆತ್ಮನೇ ಅವಿದ್ಯೆಯಿಂದ ಪರಿಚ್ಛಿನ್ನನಾಗಿ ಪ್ರಾಣಿಗಳಿಗೆ ವಿಷಯಸುಖದ ರೂಪದಿಂದ ತೋರುತ್ತಿರುವನು.

೧೦ ವಿಕಾರವಾಗದೆ ದರ್ಶನವಾಗುವುದಿಲ್ಲ.

೧೧ ಭಯಹೇತುವೂ ಅವಿದ್ಯಾಕೃತವೂ ಆದ ನಾನಾತ್ವವನ್ನು ನೋಡದಿರುವುದರಿಂದ.

೧೨ ಯಾವನು ಏಕವೂ ಅಭಿನ್ನವೂ ಆದ ಆತ್ಮತತ್ತ್ವವನ್ನು ನೋಡದಿರುವನೋ ಅವನು ವಿದ್ವಾಂಸನಾಗಿದ್ದರೂ ಅಜ್ಞಾನಿಯೆ.]

## ಎಂಟನೆಯ ಅನುವಾಕ

ಭೀಷಾಽಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ । ಸೈಷಾಽಽನಂದಸ್ಯ ಮೀಮಾಗ್ಂಸಾ ಭವತಿ । ಯುವಾ ಸ್ಯಾತ್ ಸಾಧು ಯುವಾಧ್ಯಾಯಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ । ಸ ಏಕೋ ದೇವಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಗಂಧರ್ವಾಣಾಮಾನಂದಾಃ । ಸ ಏಕಃ ಪಿತೃಣಾಂ ಚಿರಲೋಕಲೋಕಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪಿತೃಣಾಂ ಚಿರಲೋಕಲೋಕಾನಾಮಾನಂದಾಃ । ಸ ಏಕ ಆಜಾನಜಾನಾಂ ದೇವಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಾಜಾನಜಾನಾಂ ದೇವಾನಾಮಾನಂದಾಃ । ಸ ಏಕಃ ಕರ್ಮದೇವಾನಾಂ ದೇವನಾಮಾನಂದಃ । ಯೇ ಕರ್ಮಣಾ ದೇವಾನಪಿಯಂತಿ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನಂದಾಃ । ಸ ಏಕೋ ದೇವಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಾನಾಮಾನಂದಾಃ । ಸ

ಏಕ ಇಂದ್ರಸ್ಯಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಿಂದ್ರಸ್ಯಾನಂದಾಃ । ಸ ಏಕೋ ಬೃಹಸ್ಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಬೃಹಸ್ಪತೇರಾನಂದಾಃ । ಸ ಏಕಃ ಪ್ರಜಾಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪ್ರಜಾಪತೇರಾನಂದಾಃ । ಸ ಏಕೋ ಬ್ರಹ್ಮಣ ಆನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಾಮತಿ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ । ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ । ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ । ತದಪ್ಯೇಷ ಶ್ಲೋಕೋ ಭವತಿ ॥ ಇತಿ ಅಷ್ಟಮೋಽನುವಾಕಃ ॥

ಅಸ್ಮಾತ್ ಭೀಷಾ = ಇವನ ಭಯದಿಂದ ವಾತಃ = ವಾಯುವು ಪವತೇ = ಬೀಸುತ್ತಾನೆ; [ಅಸ್ಮಾತ್] ಭೀಷಾ = ಇವನ ಭಯದಿಂದ ಸೂರ್ಯಃ = ಸೂರ್ಯನು ಉದೇತಿ=ಉದಯಿಸುತ್ತಾನೆ; ಅಸ್ಮಾತ್ ಭೀಷಾ = ಇವನ ಭಯದಿಂದ ಅಗ್ನಿಃ ಚ ಇಂದ್ರಃ ಚ=ಅಗ್ನಿಯು ಮತ್ತು ಇಂದ್ರನು [ತಮ್ಮ ಕೆಲಸಗಳಲ್ಲಿ ತೊಡಗಿರುತ್ತಾರೆ]. ಪಂಚಮಃ=ಐದನೆಯವನಾದ ಮೃತ್ಯುಃ = ಮೃತ್ಯುವು ಧಾವತಿ = ಓಡುತ್ತಾನೆ.

ಇವನ ಭಯದಿಂದ ವಾಯುವು ಬೀಸುತ್ತಾನೆ, ಸೂರ್ಯನು ಉದಯಿಸುತ್ತಾನೆ; ಇವನ ಭಯದಿಂದ ಅಗ್ನಿಯೂ ಇಂದ್ರನೂ (ತಮ್ಮ ಕೆಲಸಗಳಲ್ಲಿ ಪ್ರವೃತ್ತರಾಗಿರುತ್ತಾರೆ); ಐದನೆಯವನಾದ ಮೃತ್ಯುವು ಓಡುತ್ತಾನೆ.

[ಈ ಮಂತ್ರದಿಂದ ಇಂದ್ರಾದಿ ದೇವತೆಗಳ ಭಯಕ್ಕೆ ಕಾರಣವಾದ ಬ್ರಹ್ಮವು ಇದೆ ಎಂದು ನಿಶ್ಚಯವಾಗುತ್ತದೆ.]

**ಸಾ ಏಷಾ** = ಆ ಇದು **ಆನಂದಸ್ಯ** = ಆನಂದದ **ಮೀಮಾಂಸಾ ಭವತಿ** = ವಿಚಾರವಾಗಿರುತ್ತದೆ. **ಯುವಾ ಸಾಧುಯುವಾ ಸ್ಯಾತ್** = ಯುವಕನೂ ಒಳ್ಳೆಯ ಯುವಕನೂ ಆಗಿರಲಿ; **ಅಧ್ಯಾಯಕಃ** = ವೇದಾಧ್ಯಯನವನ್ನು ಮಾಡಿದವನಾಗಿರಲಿ. **ಆಶಿಷ್ಠಃ** = ಅತ್ಯಂತವಾಗಿ ಆಶೆಯುಳ್ಳವನೂ **ದೃಢಿಷ್ಠಃ** = ದೃಢತಮನೂ **ಬಲಿಷ್ಠಃ** = ಬಲಿಷ್ಠನೂ [ಆಗಿರಲಿ]; **ವಿತ್ತಸ್ಯ ಪೂರ್ಣಾ**=ವಿತ್ತದಿಂದ ಪೂರ್ಣವಾದ **ಇಯಂ**= ಈ **ಸರ್ವಾ ಪೃಥಿವೀ** = ಪೃಥಿವಿಯೆಲ್ಲವೂ **ತಸ್ಯ ಸ್ಯಾತ್** = ಅವನಿಗೆ ಇರಲಿ. **ಸಃ** = ಅದು **ಏಕಃ** = ಒಂದು **ಮಾನುಷಃ ಆನಂದಃ** = ಮಾನುಷ ಆನಂದವು. **ತೇ ಯೇ ಶತಂ ಮಾನುಷಾಃ ಆನಂದಾಃ** = ಯಾವ ಆ ನೂರು ಮಾನುಷ ಆನಂದಗಳಿವೆಯೊ **ಸಃ** = ಅದು **ಮನುಷ್ಯಗಂಧರ್ವಾಣಾಂ** = ಮನುಷ್ಯಗಂಧರ್ವರ **ಏಕಃ ಆನಂದಃ** = ಒಂದು ಆನಂದ; **ಚ** = ಮತ್ತು **ಅಕಾಮಹತಸ್ಯ** = ಅಕಾಮಹತನಾದ **ಶ್ರೋತ್ರಿಯಸ್ಯ**=ಶ್ರೋತ್ರಿಯನ[ಒಂದು ಆನಂದ]. **ತೇ ಯೇ ಶತಂ ಮನುಷ್ಯಗಂಧರ್ವಾಣಾಂ ಆನಂದಾಃ ಸಃ ದೇವಗಂಧರ್ವಾಣಾಂ** = ದೇವಗಂಧರ್ವರ **ಏಕಃ ಆನಂದಃ; ಅಕಾಮಹತಸ್ಯ ಶ್ರೋತ್ರಿಯಸ್ಯ ಚ; ಚಿರಲೋಕಲೋಕಾನಾಂ ಪಿತೃಣಾಂ** = ಚಿರಲೋಕಲೋಕವುಳ್ಳ ಪಿತೃಗಳ; **ಆಜಾನಜಾನಾಂ ದೇವಾನಾಂ** = ಆಜಾನಜ ದೇವತೆಗಳ; **ಕರ್ಮದೇವಾನಾಂ ದೇವಾನಾಂ** = ಕರ್ಮದೇವ ದೇವತೆಗಳ; **ಯೇ** = ಯಾರು **ಕರ್ಮಣಾ**=ವೈದಿಕ ಕರ್ಮದಿಂದ **ದೇವಾನ್ ಅಪಿಯಂತಿ**=ದೇವತ್ವವನ್ನು ಹೊಂದಿರುತ್ತಾರೆ. **ದೇವಾನಾಂ**=ದೇವತೆಗಳ; **ಇಂದ್ರಸ್ಯ**=ಇಂದ್ರನ; **ಬೃಹಸ್ಪತೇಃ**= ಬ್ರಹಸ್ಪತಿಯು; **ಪ್ರಜಾಪತೇಃ** = ಪ್ರಜಾಪತಿಯ; **ಬ್ರಹ್ಮಣಃ** = ಬ್ರಹ್ಮನ.

ಆ ಇದು ಆನಂದದ ವಿಚಾರವಾಗಿರುತ್ತದೆ; ವೇದಾಧ್ಯಯನಸಂಪನ್ನನೂ, ಅತ್ಯಂತವಾಗಿ ಆಶೆಯುಳ್ಳವನೂ, ದೃಢತಮನೂ, ಬಲಿಷ್ಠನೂ, ಐಶ್ವರ್ಯದಿಂದ ಪೂರ್ಣವಾದ ಪೃಥ್ವಿಯೆಲ್ಲವನ್ನೂ ಹೊಂದಿರುವವನೂ ಆದ ಒಬ್ಬ ಒಳ್ಳೆಯ ಯುವಕನಿರಲಿ; ಅವನ ಆನಂದವು ಮನುಷ್ಯರ ಒಂದು ಆನಂದ. ಆ ನೂರು ಮಾನುಷ ಆನಂದಗಳು ಮನುಷ್ಯ ಗಂಧರ್ವರ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ಮನುಷ್ಯ ಗಂಧರ್ವರ ಆ ನೂರು ಆನಂದಗಳು ದೇವಗಂಧರ್ವರ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ದೇವಗಂಧರ್ವರ ಆ ನೂರು ಆನಂದಗಳು ಚಿರಲೋಕಲೋಕವುಳ್ಳ ಪಿತೃಗಳ ಒಂದು ಆನಂದ, ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ಚಿರಲೋಕಲೋಕವುಳ್ಳ ಪಿತೃಗಳ ಆ ನೂರು ಆನಂದಗಳು ಆಜಾನಜ ದೇವತೆಗಳ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ಆಜಾನಜ ದೇವತೆಗಳ ಆ ನೂರು ಆನಂದಗಳು ಕರ್ಮದೇವತೆಗಳಾದ ದೇವತೆಗಳ

ಒಂದು ಆನಂದ; ಅವರು ವೈದಿಕಕರ್ಮದಿಂದ ದೇವತ್ವವನ್ನು ಹೊಂದಿರುತ್ತಾರೆ; ಮತ್ತು (ಅದು) ಅಕಾಮಹತನಾದ ಶ್ರೋತ್ರಿಯನ (ಆನಂದ). ಕರ್ಮದೇವತೆಗಳಾದ ದೇವತೆಗಳ ಆ ನೂರು ಆನಂದಗಳು ದೇವತೆಗಳಿಗೆ ಒಂದು ಆನಂದ, ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ದೇವತೆಗಳ ಆ ನೂರು ಆನಂದಗಳು ಇಂದ್ರನಿಗೆ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ಇಂದ್ರನ ಆ ನೂರು ಆನಂದಗಳು ಬೃಹಸ್ಪತಿಗೆ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ಬೃಹಸ್ಪತಿಯ ಆ ನೂರು ಆನಂದಗಳು ಪ್ರಜಾಪತಿಗೆ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ). ಪ್ರಜಾಪತಿಯ ಆ ನೂರು ಆನಂದಗಳು ಬ್ರಹ್ಮನಿಗೆ ಒಂದು ಆನಂದ, ಮತ್ತು ಅಕಾಮಹತನಾದ ಶ್ರೋತ್ರಿಯನ (ಆನಂದ).

[ಧನವೇ ಮೊದಲಾದ ಬಾಹ್ಯಸಾಧನಗಳಿಂದಲೂ ಜ್ಞಾನವೇ ಮೊದಲಾದ ಆಂತರಿಕ ಸಾಧನಗಳಿಂದಲೂ ಅತ್ಯಂತ ಉತ್ಕೃಷ್ಟವಾದ ಲೌಕಿಕ ಆನಂದವು ಮನುಷ್ಯನಿಗೆ ಉಂಟಾಗುತ್ತದೆ. ಬ್ರಹ್ಮಾನಂದದ ಅನುಭವಕ್ಕಾಗಿ ಲೌಕಿಕ ಆನಂದವು ಇಲ್ಲಿ ನಿರ್ದೇಶಿಸಲ್ಪಟ್ಟಿದೆ; ಏಕೆಂದರೆ ನಮ್ಮ ಅನುಭವಕ್ಕೆ ಬರುವ ಆನಂದದ ಮೂಲಕವಾಗಿಯೇ ವಿಷಯಾತೀತವಾದ ಬ್ರಹ್ಮಾನಂದವನ್ನು ಅರಿತುಕೊಳ್ಳಲು ಸಾಧ್ಯ. ನಿಜವಾಗಿ ನೋಡಿದರೆ ಲೌಕಿಕ ಆನಂದವೂ ಕೂಡ ಬ್ರಹ್ಮಾನಂದದ ಒಂದು ಅಂಶವೇ. ಅವಿದ್ಯೆಯಿಂದ ಜ್ಞಾನವು ಮರೆಯಾಗಿ ಅವಿದ್ಯೆಯು ಹೆಚ್ಚುತ್ತ ಬಂದಂತೆ ಬ್ರಹ್ಮಾನಂದವು ಲೌಕಿಕ ಆನಂದವಾಗಿ ಪರಿಣಮಿಸುತ್ತದೆ. ಈ ಆನಂದವನ್ನೇ ಸಮಸ್ತ ಪ್ರಾಣಿಗಳು ತಮ್ಮ ಕರ್ಮಕ್ಕೂ ಜ್ಞಾನಕ್ಕೂ ಅನುಸಾರವಾಗಿ ಅನುಭವಿಸುತ್ತಾರೆ. ಅಕಾಮಹತನಾದ ಶ್ರೋತ್ರಿಯನಿಗೆ ಪ್ರತ್ಯಕ್ಷವಾದ ಈ ಬ್ರಹ್ಮಾನಂದವೇ ಅವಿದ್ಯಾಕಾಮಕರ್ಮಗಳು ಕಡಮೆಯಾದಂತೆ ನೂರು ಮಡಿಯಾಗಿ ಹೆಚ್ಚುತ್ತಿರುವ ಮನುಷ್ಯಗಂಧರ್ವರೇ ಮೊದಲಾಗಿ ಮೇಲುಮೇಲಿನ ಅಂತಸ್ತಿನಲ್ಲಿರುವವರ ಆನಂದ. ಇದು ಬ್ರಹ್ಮದ ಆನಂದದ ವರೆಗೂ ವ್ಯಾಪಿಸಿರುತ್ತದೆ. ಅವಿದ್ಯಾಕಲ್ಪಿತವಾದ ವಿಷಯ-ವಿಷಯಿ ಎಂಬ ಭಾವವು ವಿದ್ಯೆಯಿಂದ ತೊಲಗಿಸಲ್ಪಟ್ಟರೆ ಸ್ವಾಭಾವಿಕವೂ ಪರಿಪೂರ್ಣವೂ ಏಕವೂ ಆದ ಅದ್ವೈತಾನಂದವು ಮಾತ್ರ ಉಳಿಯುತ್ತದೆ.

೧ ಮನುಷ್ಯರಾಗಿದ್ದು ಕರ್ಮಜ್ಞಾನವಿಶೇಷಗಳಿಂದ ಗಂಧರ್ವತ್ವವನ್ನು ಹೊಂದಿರುವವರು.

೨ ಜನ್ಮದಿಂದಲೇ ಗಂಧರ್ವರಾಗಿರುವವರು.

೩ ಚಿರಲೋಕಸ್ಥಾಯಿಯಾದ ಲೋಕ.

೪ ಆಜಾನ ಎಂದರೆ ದೇವಲೋಕ; ಅದರಲ್ಲಿ ಹುಟ್ಟುವವರು ಆಜಾನಜ ದೇವತೆಗಳು. ಇವರು ಸ್ಮಾರ್ತಕರ್ಮಗಳಿಂದ ದೇವತೆಗಳ ಸ್ಥಾನದಲ್ಲಿ ಹುಟ್ಟಿರುತ್ತಾರೆ.

೫ ಹವಿಸ್ಸನ್ನು ಪರಿಗ್ರಹಿಸುವ ಮೂವತ್ತುಮೂರು ಮಂದಿ ದೇವತೆಗಳು.
೬ ದೇವತೆಗಳ ಸ್ವಾಮಿ.
೭ ದೇವತೆಗಳ ಆಚಾರ್ಯ.
೮ ತ್ರೈಲೋಕ್ಯಶರೀರಿಯಾದ ವಿರಾಟ್ ಪುರುಷ.
೯ ಸಮಷ್ಟಿ–ವ್ಯಷ್ಟಿರೂಪನೂ ಸಂಸಾರಮಂಡಲವ್ಯಾಪಿಯೂ ಆದ ಹಿರಣ್ಯಗರ್ಭನೆಂಬ ಬ್ರಹ್ಮ. ಇವನಲ್ಲಿ ಎಲ್ಲ ಆನಂದಗಳು ಏಕತ್ವವನ್ನು ಹೊಂದಿರುತ್ತವೆ.]

**ಯಃ** = ಯಾವ **ಸಃ ಚ ಅಯಂ** = ಆ ಇವನು **ಪುರುಷೇ**=ಪುರುಷನಲ್ಲಿರುವನೊ **ಚ** = ಮತ್ತು **ಯಃ ಅಸೌ** = ಯಾವ ಅವನು **ಆದಿತ್ಯೇ** = ಆದಿತ್ಯನಲ್ಲಿರುವನೊ **ಸಃ ಏಕಃ** = ಅವನು ಒಬ್ಬನೇ. **ಯಃ** = ಯಾವನು **ಏವಂವಿತ್** = ಹೀಗೆ ತಿಳಿದುಕೊಳ್ಳುತ್ತಾನೆಯೊ **ಸಃ**=ಅವನು **ಅಸ್ಮಾತ್ ಲೋಕಾತ್**=ಈ ಲೋಕದಿಂದ **ಪ್ರೇತ್ಯ**=ಹೊರಟು ಹೋಗಿ **ಏತಂ**=ಈ **ಅನ್ನಮಯಂ ಆತ್ಮಾನಂ**=ಅನ್ನಮಯನೆಂಬ ಆತ್ಮನನ್ನು **ಉಪ-ಸಂಕ್ರಾಮತಿ** = ಹೊಂದುತ್ತಾನೆ; **ಏತಂ ಪ್ರಾಣಮಯಂ ಆತ್ಮಾನಂ ಉಪಸಂಕ್ರಾ-ಮತಿ; ಏತಂ ಮನೋಮಯಂ ಆತ್ಮಾನಂ ಉಪಸಂಕ್ರಾಮತಿ; ಏತಂ ವಿಜ್ಞಾನಮಯಂ ಆತ್ಮಾನಂ ಉಪಸಂಕ್ರಾಮತಿ; ಏತಂ ಆನಂದಮಯಂ ಆತ್ಮಾನಂ ಉಪಸಂಕ್ರಾಮತಿ; ತತ್ ಅಪಿ ಏಷಃ ಶ್ಲೋಕಃ ಭವತಿ.**

ಯಾವ[1] ಆ ಇವನು ಪುರುಷನಲ್ಲಿರುವನೊ ಮತ್ತು ಯಾವ ಅವನು ಆದಿತ್ಯನಲ್ಲಿರುವನೊ ಅವನು ಒಬ್ಬನೇ. ಯಾವನು ಹೀಗೆ ತಿಳಿದುಕೊಳ್ಳುವನೊ[2] ಅವನು ಈ ಲೋಕದಿಂದ ಹೊರಟುಹೋಗಿ[3] ಈ ಅನ್ನಮಯನೆಂಬ ಆತ್ಮನನ್ನು ಹೊಂದುತ್ತಾನೆ[4], ಈ ಪ್ರಾಣಮಯನೆಂಬ ಆತ್ಮನನ್ನು ಹೊಂದುತ್ತಾನೆ, ಈ ಮನೋಮಯನೆಂಬ ಆತ್ಮನನ್ನು ಹೊಂದುತ್ತಾನೆ, ಈ ವಿಜ್ಞಾನಮಯನೆಂಬ ಆತ್ಮನನ್ನು ಹೊಂದುತ್ತಾನೆ, ಈ ಆನಂದಮಯನೆಂಬ ಆತ್ಮನನ್ನು ಹೊಂದುತ್ತಾನೆ.[5] ಆ ವಿಷಯದಲ್ಲಿ ಈ ಶ್ಲೋಕವಿರುವುದು.

[ಜ್ಞಾನಿಗೆ ಬ್ರಹ್ಮಪ್ರಾಪ್ತಿಯಾಗುವುದೊ ಇಲ್ಲವೊ ಎಂಬ ಕೊನೆಯ ಅನುಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳಿದೆ.
೧ ಯಾವನು ಹೃದಯಾಕಾಶದಲ್ಲಿ ಇರುವನೊ ಮತ್ತು ಆಕಾಶಾದಿಕಾರ್ಯವನ್ನು ಸೃಷ್ಟಿಸಿ ಅದನ್ನೇ ಪ್ರವೇಶಿಸಿರುವನೊ ಅವನು.
೨ 'ಅದ್ವೈತವೂ ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವೇ ನಾನಾಗಿರುವೆನು' ಎಂದು.
೩ ಯಾವ ಅಪೇಕ್ಷೆಯೂ ಇಲ್ಲದವನಾಗಿ.
೪ ಅನ್ನಮಯನಾದ ಶರೀರಾತ್ಮನಿಗಿಂತ ಬೇರೆ ಏನನ್ನೂ ನೋಡುವುದಿಲ್ಲ. ಎಲ್ಲವೂ ಸ್ಥೂಲಭೂತವಾದ ಅನ್ನಮಯ ಆತ್ಮನೇ ಎಂದು ತಿಳಿದುಕೊಳ್ಳುತ್ತಾನೆ. ಇದೇ ರೀತಿ ಪ್ರಾಣಮಯನೇ ಮೊದಲಾದ ಆತ್ಮರನ್ನು ತಿಳಿದುಕೊಳ್ಳಬೇಕು.

* ಇಲ್ಲಿ ಸಂಕ್ರಮಣವೆಂದರೆ 'ಹೊಂದುವುದು' ಎಂಬುದು ನಿಜವಾದ ಅರ್ಥವಲ್ಲ. ಆತ್ಮನನ್ನು ಅರಿತುಕೊಳ್ಳುವುದೇ ಸಂಕ್ರಮಣಶಬ್ದದ ಅರ್ಥ. ಆತ್ಮಜ್ಞಾನವು ಉದಯವಾದರೆ ಹೃದಯಗುಹಾಸಂಬಂಧದಿಂದ ಅನ್ನಮಯಾದಿ ಅನಾತ್ಮರುಗಳಲ್ಲಿ ಉಂಟಾಗಿರುವ ಆತ್ಮತ್ವಭ್ರಾಂತಿಯು ಸಂಕ್ರಮಣದಿಂದ ನಾಶವಾಗುತ್ತದೆ. ಅವಿದ್ಯೆಯಿಂದ ಹೊಂದದೇ ಇದ್ದ ಆತ್ಮನು ವಿದ್ಯೆಯಿಂದ ಹೊಂದಲ್ಪಡುತ್ತಾನೆ ಎಂಬುದನ್ನು ಉಪದೇಶಿಸಲು ಸಂಕ್ರಮಣ-ಶಬ್ದವನ್ನು ಉಪಚಾರದಿಂದ ಪ್ರಯೋಗಿಸಿದೆ. ಸರ್ವಗತನಾದ ಆತ್ಮನಿಗೆ ಬೇರೆ ಯಾವ ವಿಧದಿಂದಲೂ ಸಂಕ್ರಮಣವು ಸಾಧ್ಯವಿಲ್ಲ.]

# ಒಂಬತ್ತನೆಯ ಅನುವಾಕ

ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ । ಏತಗ್ಂ ಹ ವಾವ ನ ತಪತಿ । ಕಿಮಹಗ್ಂ ಸಾಧು ನಾಕರವಮ್ । ಕಿಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ ಆತ್ಮಾನಗ್ಂ ಸ್ಪೃಣುತೇ । ಉಭೇ ಹ್ಯೇವೈಷ ಏತೇ ಆತ್ಮಾನಗ್ಂ ಸ್ಪೃಣುತೇ । ಯ ಏವಂ ವೇದ । ಇತ್ಯುಪನಿಷತ್ ॥ ಇತಿ ನವಮೋಽನುವಾಕಃ ॥

**ಯತಃ** = ಯಾವುದರಿಂದ **ವಾಚಃ** = ವಾಕ್ಕುಗಳು **ಮನಸಾ ಸಹ** = ಮನಸ್ಸಿನೊಂದಿಗೆ **ಅಪ್ರಾಪ್ಯ** = ಹೊಂದದೆ **ನಿವರ್ತಂತೇ** = ಹಿಂತಿರುಗುವುವೊ **ಬ್ರಹ್ಮಣಃ** = [ಆ] ಬ್ರಹ್ಮದ **ಆನಂದಂ** = ಆನಂದವನ್ನು **ವಿದ್ವಾನ್** = ತಿಳಿದವನು **ಕುತಶ್ಚನ** = ಯಾವುದಕ್ಕೂ **ನ ಬಿಭೇತಿ** = ಹೆದರುವುದಿಲ್ಲ. **ಕಿಂ [ಕಸ್ಮಾತ್]** = ಏಕೆ **ಅಹಂ** = ನಾನು **ಸಾಧು** = ಒಳ್ಳೆಯದನ್ನು **ನ ಅಕರವಂ** = ಮಾಡಲಿಲ್ಲ? **ಕಿಂ ಅಹಂ ಪಾಪಂ ಅಕರವಂ** = ನಾನು ಪಾಪವನ್ನು ಏಕೆ ಮಾಡಿದೆನು? **ಇತಿ** = ಎಂಬ [ಪಶ್ಚಾತ್ತಾಪವು] **ಏತಂ ಹ ವಾವ** = ಇವನನ್ನು **ನ ತಪತಿ** = ತಪಿಸುವುದಿಲ್ಲ. **ಯಃ** = ಯಾವನು **ಏವಂ** = ಹೀಗೆ **ವಿದ್ವಾನ್** = ತಿಳಿದುಕೊಂಡಿರುವವನೊ **ಸಃ** = ಅವನು **ಏತೇ** = ಈ ಎರಡನ್ನು **ಆತ್ಮಾನಂ** = ಆತ್ಮನನ್ನಾಗಿ **ಸ್ಪೃಣುತೇ** = ಮಾಡಿಕೊಂಡಿರುತ್ತಾನೆ. **ಹಿ** = ಏಕೆಂದರೆ **ಯಃ** = ಯಾವನು **ಏವಂ** = ಹೀಗೆ **ವೇದ** = ತಿಳಿದುಕೊಳ್ಳುವನೊ **ಏಷಃ** = ಇವನು **ಏತೇ ಉಭೇ ಏವ** = ಈ ಎರಡನ್ನೂ **ಆತ್ಮಾನಂ** = ಆತ್ಮನನ್ನಾಗಿ **ಸ್ಪೃಣುತೇ** = ಮಾಡಿಕೊಂಡಿರುತ್ತಾನೆ. **ಇತಿ ಉಪನಿಷತ್** = ಹೀಗೆ ಉಪನಿಷತ್ತು.

ಯಾವುದರಿಂದ[೧] ವಾಕ್ಕುಗಳು[೨] ಮನಸ್ಸಿನೊಂದಿಗೆ (ಅದನ್ನು) ಹೊಂದದೆ ಹಿಂತಿರುಗುವುವೊ ಆ ಬ್ರಹ್ಮದ ಆನಂದವನ್ನು ತಿಳಿದವನು[೩] ಯಾವುದಕ್ಕೂ ಹೆದರುವುದಿಲ್ಲ. 'ನಾನು ಒಳ್ಳೆಯದನ್ನು ಏಕೆ ಮಾಡಲಿಲ್ಲ? ನಾನು ಪಾಪವನ್ನು ಏಕೆ ಮಾಡಿದೆನು?' ಎಂಬ ಪಶ್ಚಾತ್ತಾಪವು[೪] ಇವನನ್ನು ತಪಿಸುವುದಿಲ್ಲ. ಯಾವನು ಹೀಗೆ ಅರಿತುಕೊಂಡಿರುವನೊ ಅವನು ಈ ಎರಡನ್ನೂ ಆತ್ಮನನ್ನಾಗಿ ಮಾಡಿಕೊಂಡಿರುತ್ತಾನೆ.[೫] ಏಕೆಂದರೆ ಯಾವನು ಹೀಗೆ ತಿಳಿಯುವನೊ ಅವನು ಈ ಎರಡನ್ನೂ ಆತ್ಮನನ್ನಾಗಿ ಮಾಡಿಕೊಂಡಿರುತ್ತಾನೆ. ಹೀಗೆ ಉಪನಿಷತ್ತು.[೬]

[ಈ ವಲ್ಲಿಯ ಅರ್ಥವನ್ನೆಲ್ಲ ಇಲ್ಲಿ ಸಂಗ್ರಹವಾಗಿ ಹೇಳಿದೆ.

೧ ಅದ್ವಯಾನಂದವಾದ ಆತ್ಮನಿಂದ.

೨ ದ್ರವ್ಯ ಗುಣ ಮೊದಲಾದ ಸವಿಕಲ್ಪವಸ್ತುಗಳನ್ನು ವಿಷಯೀಕರಿಸುವ ಹೆಸರುಗಳು. ಇವು ನಿರ್ವಿಕಲ್ಪಬ್ರಹ್ಮದ ವಿಷಯದಲ್ಲಿ ಪ್ರಯೋಗಿಸಲ್ಪಟ್ಟರೆ ಅದನ್ನು ಪ್ರಕಾಶಿಸುವುದಿಲ್ಲ.

೩ ಅಕಾಮಹತನೂ ಪಾಪರಹಿತನೂ ಸರ್ವೈಷಣಗಳಿಂದ ಬಿಡಲ್ಪಟ್ಟವನೂ ಆದ ಶ್ರೋತ್ರಿಯ.

೪ ಮರಣಕಾಲದಲ್ಲಿ.

೫ ಪಾಪಪುಣ್ಯಗಳೆಂಬ ವಿಶೇಷರೂಪಗಳನ್ನು ಶೂನ್ಯಗೊಳಿಸಿ ಪರಮಾತ್ಮರೂಪದಿಂದ ಇವೆರಡನ್ನೂ ಕಂಡು ತನ್ನನ್ನು ಬಲಪಡಿಸಿಕೊಳ್ಳುತ್ತಾನೆ.

೬ ಬ್ರಹ್ಮವಿದ್ಯೆ ಎಂಬ ಉಪನಿಷತ್ತು. ಇದು ಪರಮರಹಸ್ಯ.]

# ಭೃಗುವಲ್ಲೀ

ಹರಿಃ ಓಂ । ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾ-ವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥

## ಮೊದಲನೆಯ ಅನುವಾಕ

ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ । ತಗ್ಂ ಹೋ-ವಾಚ । ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿಸಂವಿಶಂತಿ । ತದ್ವಿಜಿ-ಜ್ಞಾಸಸ್ವ । ತದ್ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥

ಇತಿ ಪ್ರಥಮೋಽನುವಾಕಃ ॥

ಭೃಗುಃ ವೈ ವಾರುಣಿಃ = ಭೃಗುವಾರುಣಿಯು—ಭಗವಃ = ಹೇ ಭಗವಂತನೆ, ಬ್ರಹ್ಮ = ಬ್ರಹ್ಮವನ್ನು ಅಧೀಹಿ = ಉಪದೇಶಿಸು ಇತಿ = ಎಂಬ [ಮಂತ್ರವನ್ನು ಹೇಳುತ್ತ] ಪಿತರಂ ವರುಣಂ = ತಂದೆಯಾದ ವರುಣನನ್ನು ಉಪಸಸಾರ = ಸಮೀಪಿಸಿದನು. [ವರುಣಃ=ವರುಣನು] ತಸ್ಮೈ=ಅವನಿಗೆ ಏತತ್=ಇದನ್ನು ಪ್ರೋವಾಚ= ಹೇಳಿದನು — ಅನ್ನಂ = ಅನ್ನ ಪ್ರಾಣಂ = ಪ್ರಾಣ ಚಕ್ಷುಃ = ಚಕ್ಷುಸ್ಸು ಶ್ರೋತ್ರಂ = ಶ್ರೋತ್ರ ಮನಃ = ಮನಸ್ಸು ವಾಚಂ = ವಾಕ್ಕು ಇತಿ = ಎಂದು. [ತತಃ = ಇನ್ನು] ತಂ = ಅವನನ್ನು ಕುರಿತು ಉವಾಚ ಹ = ಹೇಳಿದನು— ಯತಃ ವೈ = ಯಾವುದರಿಂದ ಇಮಾನಿ ಭೂತಾನಿ = ಈ ಪ್ರಾಣಿಗಳು ಜಾಯಂತೇ = ಹುಟ್ಟುತ್ತವೆಯೊ, ಜಾತಾನಿ = ಹುಟ್ಟಿದವುಗಳು ಯೇನ = ಯಾವುದರಿಂದ ಜೀವಂತಿ = ಜೀವಿಸುತ್ತವೆಯೊ, ಯತ್ = ಯಾವುದನ್ನು ಕುರಿತು ಪ್ರಯಂತಿ = ಹೋಗುತ್ತ ಅಭಿಸಂವಿಶಂತಿ = ಪ್ರವೇಶಿಸುವುವೊ

**ತತ್** = ಅದನ್ನು **ವಿಜಿಜ್ಞಾಸಸ** = ತಿಳಿದುಕೊ; **ತತ್** = ಅದು **ಬ್ರಹ್ಮ** = ಬ್ರಹ್ಮ **ಇತಿ** = ಎಂದು. **ಸಃ**=ಅವನು **ತಪಃ ಅತಪ್ಯತ**=ತಪಸ್ಸನ್ನು ಮಾಡಿದನು. **ಸಃ**=ಅವನು **ತಪಃ ತಪ್ತ್ವಾ** = ತಪಸ್ಸನ್ನು ಮಾಡಿ—

ಭೃಗುವಾರುಣಿಯು[೧] 'ಹೇ ಭಗವಂತನೆ, ಬ್ರಹ್ಮವನ್ನು ಉಪದೇಶಿಸು' ಎಂಬ (ಮಂತ್ರವನ್ನು ಹೇಳುತ್ತ) ತಂದೆಯಾದ ವರುಣನನ್ನು ಸಮೀಪಿಸಿದನು. (ವರುಣನು) ಅವನಿಗೆ ಇದನ್ನು ಹೇಳಿದನು: 'ಅನ್ನ ಪ್ರಾಣ ಚಕ್ಷುಸ್ಸು ಶ್ರೋತ್ರ ಮನಸ್ಸು ವಾಕ್ಕು.'[೨] ಇನ್ನೂ ಅವನಿಗೆ ಹೇಳಿದನು:[೩] 'ಯಾವುದರಿಂದ ಈ ಪ್ರಾಣಿಗಳು ಹುಟ್ಟುವುವೊ, ಹಾಗೆಯೇ ಹುಟ್ಟಿರುವುವುಗಳು ಯಾವುದರಿಂದ ಜೀವಿಸುತ್ತವೆಯೊ ಮತ್ತು ಯಾವುದನ್ನು ಕುರಿತು ಹೋಗಿ[೪] ಪ್ರವೇಶಿಸುವುವೊ[೫] ಅದನ್ನು ತಿಳಿದುಕೊ;[೬] ಅದು ಬ್ರಹ್ಮ.' ಭೃಗುವು ತಪಸ್ಸನ್ನು[೭] ಮಾಡಿದನು. ಅವನು ತಪಸ್ಸನ್ನು ಮಾಡಿ—

[ಇನ್ನು ಮುಂದೆ ಬ್ರಹ್ಮವಿದ್ಯೆಯ ಸಾಧನವಾದ ತಪಸ್ಸು ಮತ್ತು ಅನ್ನಾದಿವಿಷಯಗಳ ಉಪಾಸನೆಗಳು ಹೇಳಲ್ಪಡುತ್ತವೆ.

[೧] ವರುಣನ ಮಗನಾದ ಭೃಗುವೆಂಬ ಹೆಸರಿನ ಋಷಿ.

[೨] ಇವು ಬ್ರಹ್ಮೋಪಲಬ್ಧಿಯ ದ್ವಾರಗಳು.

[೩] ಬ್ರಹ್ಮದ ಲಕ್ಷಣ; ಉತ್ಪತ್ತಿಸ್ಥಿತಿಲಯಕಾಲಗಳಲ್ಲಿ ಪ್ರಾಣಿಗಳು ಯಾವುದರ ಸ್ವರೂಪವನ್ನು ಬಿಡದಿರುವುವೊ ಅದೇ ಬ್ರಹ್ಮದ ಲಕ್ಷಣ.

[೪] ನಾಶವಾಗುವ ಕಾಲದಲ್ಲಿ.

[೫] ತಾದಾತ್ಮ್ಯವನ್ನು ಹೊಂದುವುವೊ.

[೬] ಈ ಲಕ್ಷಣವುಳ್ಳ ಬ್ರಹ್ಮವನ್ನು ಅನ್ನಾದಿದ್ವಾರದಿಂದ ತಿಳಿದುಕೊ.

[೭] ಹೊರಗಿನ ಮತ್ತು ಒಳಗಿನ ಇಂದ್ರಿಯಗಳ ಸಮಾಧಾನ. ಇಂದ್ರಿಯ ಮನಸ್ಸುಗಳ ಏಕಾಗ್ರತೆಯೇ ಪರಮ ತಪಸ್ಸು.]

## ಎರಡನೆಯ ಅನುವಾಕ

ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಅನ್ನೇನ ಜಾತಾನಿ ಜೀವಂತಿ । ಅನ್ನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್‌ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ಇತಿ ದ್ವಿತೀಯೋಽನುವಾಕಃ ॥

[ಸಃ = ಅವನು] ಅನ್ನಂ = ಅನ್ನವು ಬ್ರಹ್ಮ = ಬ್ರಹ್ಮವು ಇತಿ = ಎಂದು ವ್ಯಜಾನಾತ್ = ತಿಳಿದುಕೊಂಡನು; ಹಿ = ಏಕೆಂದರೆ ಅನ್ನಾತ್ ಏವ ಖಲು = ಅನ್ನದಿಂದಲೇ ಇಮಾನಿ ಭೂತಾನಿ ಜಾಯಂತೇ = ಈ ಪ್ರಾಣಿಗಳು ಹುಟ್ಟುತ್ತವೆ; ಜಾತಾನಿ ಅನ್ನೇನ ಜೀವಂತಿ = ಹುಟ್ಟಿದವುಗಳು ಅನ್ನದಿಂದ ಜೀವಿಸುತ್ತವೆ; ಅನ್ನಂ ಪ್ರಯಂತಿ ಅಭಿಸಂವಿಶಂತಿ ಇತಿ = ಅನ್ನವನ್ನು ಕುರಿತು ಹೋಗುತ್ತ ಪ್ರವೇಶಿಸುತ್ತವೆ. ತತ್ ವಿಜ್ಞಾಯ = ಅದನ್ನು ಅರಿತುಕೊಂಡು [ಭೃಗುಃ = ಭೃಗುವು] ಭಗವಃ = ಹೇ ಭಗವಂತನೆ ಬ್ರಹ್ಮ ಅಧೀಹಿ = ಬ್ರಹ್ಮವನ್ನು ಉಪದೇಶಿಸು ಇತಿ = ಎಂದು ಪುನಃ ಏವ ಪಿತರಂ ಉಪಸಸಾರ = ಪುನಃ ತಂದೆಯಾದ ವರುಣನನ್ನು ಸಮೀಪಿಸಿದನು. [ವರುಣಃ = ವರುಣನು] ತಂ = ಅವನನ್ನು ಕುರಿತು ಉವಾಚ ಹ = ಹೇಳಿದನು— ತಪಸಾ = ತಪಸ್ಸಿನಿಂದ ಬ್ರಹ್ಮ ವಿಜಿಜ್ಞಾಸಸ್ವ = ಬ್ರಹ್ಮವನ್ನು ತಿಳಿದುಕೊ; ತಪಃ ಬ್ರಹ್ಮ = ತಪಸ್ಸು ಬ್ರಹ್ಮ. ಸಃ ತಪಃ ಅತಪ್ಯತ = ಅವನು ತಪಸ್ಸನ್ನು ಮಾಡಿದನು. ಸಃ ತಪಃ ತಪ್ತ್ವಾ = ಅವನು ತಪಸ್ಸನ್ನು ಮಾಡಿ—

ಅನ್ನವು[೧] ಬ್ರಹ್ಮ ಎಂದು ತಿಳಿದುಕೊಂಡನು; ಏಕೆಂದರೆ ಅನ್ನದಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ, ಹುಟ್ಟಿದವುಗಳು ಅನ್ನದಿಂದ ಜೀವಿಸುತ್ತವೆ ಮತ್ತು ಅನ್ನವನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಅದನ್ನು ಅರಿತುಕೊಂಡು (ಭೃಗುವು), 'ಹೇ ಭಗವಂತನೆ, ಬ್ರಹ್ಮವನ್ನು ಉಪದೇಶಿಸು' ಎಂದು (ಹೇಳುತ್ತ) ಪುನಃ ತಂದೆಯಾದ ವರುಣನನ್ನು ಸಮೀಪಿಸಿದನು.[೨] (ವರುಣನು) ಅವನನ್ನು ಕುರಿತು ಹೇಳಿದನು: 'ತಪಸ್ಸಿನಿಂದ ಬ್ರಹ್ಮವನ್ನು ತಿಳಿದುಕೊ; ತಪಸ್ಸು ಬ್ರಹ್ಮವು.'[೩] ಅವನು ತಪಸ್ಸನ್ನು ಮಾಡಿದನು. ಅವನು ತಪಸ್ಸನ್ನು ಮಾಡಿ—

[೧ ಸ್ಥೂಲದೇಹಕಾರಣವಾದ ವಿರಾಟ್ ಎಂಬ ಹೆಸರಿನಿಂದ ಪ್ರಸಿದ್ಧವಾದ ಭೂತ ಪಂಚಕ.

೨ ಅನ್ನಕ್ಕೆ ಉತ್ಪತ್ತಿಯಿರುವುದರಿಂದ ಭೃಗುವಿಗೆ ಸಂಶಯುವಾಯಿತು.

೩ ಎಲ್ಲಿಯು ವರೆಗೆ ಬ್ರಹ್ಮದ ಲಕ್ಷಣವು ನಿರತಿಶಯುವಾಗುವುದಿಲ್ಲವೋ, ಎಲ್ಲಿಯು ವರೆಗೆ ಜಿಜ್ಞಾಸೆಯೂ ಹೋಗುವುದಿಲ್ಲವೊ ಅಲ್ಲಿಯು ವರೆಗೆ ತಪಸ್ಸೇ ಸಾಧನ.]

## ಮೂರನೆಯ ಅನುವಾಕ

ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಪ್ರಾಣೇನ ಜಾತಾನಿ ಜೀವಂತಿ । ಪ್ರಾಣಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ಇತಿ ತೃತೀಯೋಽನುವಾಕಃ ॥

[ಅನ್ವಯಾರ್ಥ ಹಿಂದಿನಂತೆಯೇ. ಅನ್ನದ ಸ್ಥಾನದಲ್ಲಿ ಪ್ರಾಣವನ್ನು ಸೇರಿಸಿಕೊಳ್ಳಬೇಕು.]

ಪ್ರಾಣವು[1] ಬ್ರಹ್ಮ ಎಂದು ತಿಳಿದುಕೊಂಡನು; ಏಕೆಂದರೆ ಪ್ರಾಣದಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ, ಹುಟ್ಟಿದವುಗಳು ಪ್ರಾಣದಿಂದ ಜೀವಿಸುತ್ತವೆ ಮತ್ತು ಪ್ರಾಣವನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಅದನ್ನು ಅರಿತುಕೊಂಡು (ಭೃಗುವು), 'ಹೇ ಭಗವಂತನೆ, ಬ್ರಹ್ಮವನ್ನು ಉಪದೇಶಿಸು,' ಎಂದು (ಹೇಳುತ್ತ) ಪುನಃ ತಂದೆಯಾದ ವರುಣನನ್ನು ಸಮೀಪಿಸಿದನು. (ವರುಣನು) ಅವನನ್ನು ಕುರಿತು ಹೇಳಿದನು: 'ತಪಸ್ಸಿನಿಂದ ಬ್ರಹ್ಮವನ್ನು ತಿಳಿದುಕೊ; ತಪಸ್ಸು ಬ್ರಹ್ಮವು.' ಅವನು ತಪಸ್ಸನ್ನು ಮಾಡಿದನು. ಅವನು ತಪಸ್ಸನ್ನು ಮಾಡಿ—

[[1] ವಿರಾಟ್‌ಪುರುಷನ ಕಾರಣನಾದ ಕ್ರಿಯಾಶಕ್ತಿವಿಶಿಷ್ಟನಾದ ಹಿರಣ್ಯಗರ್ಭ.]

## ನಾಲ್ಕನೆಯ ಅನುವಾಕ

ಮನೋ ಬ್ರಹ್ಮೇತಿ ವ್ಯಜಾನಾತ್ । ಮನಸೋ ಹ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಮನಸಾ ಜಾತಾನಿ ಜೀವಂತಿ । ಮನಃ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ಇತಿ ಚತುರ್ಥೋಽನುವಾಕಃ ॥

ಮನಸ್ಸು[೧] ಬ್ರಹ್ಮ ಎಂದು ತಿಳಿದುಕೊಂಡನು; ಏಕೆಂದರೆ ಮನಸ್ಸಿನಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ, ಹುಟ್ಟಿದವುಗಳು ಮನಸ್ಸಿನಿಂದ ಜೀವಿಸುತ್ತವೆ ಮತ್ತು ಮನಸ್ಸನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಅದನ್ನು ಅರಿತುಕೊಂಡು (ಭೃಗುವು), 'ಹೇ ಭಗವಂತನೆ, ಬ್ರಹ್ಮವನ್ನು ಉಪದೇಶಿಸು' ಎಂದು (ಹೇಳುತ್ತ) ಪುನಃ ತಂದೆಯಾದ ವರುಣನನ್ನು ಸಮೀಪಿಸಿದನು. (ವರುಣನು) ಅವನನ್ನು ಕುರಿತು ಹೇಳಿದನು: 'ತಪಸ್ಸಿನಿಂದ ಬ್ರಹ್ಮವನ್ನು ತಿಳಿದುಕೊ; ತಪಸ್ಸು ಬ್ರಹ್ಮವು.' ಅವನು ತಪಸ್ಸು ಮಾಡಿದನು. ಅವನು ತಪಸ್ಸನ್ನು ಮಾಡಿ—

[[೧] ಸಂಕಲ್ಪಶಕ್ತಿವಿಶಿಷ್ಟನಾದ ಹಿರಣ್ಯಗರ್ಭ.]

## ಐದನೆಯ ಅನುವಾಕ

ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ವಿಜ್ಞಾನೇನ ಜಾತಾನಿ ಜೀವಂತಿ । ವಿಜ್ಞಾನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ಇತಿ ಪಂಚಮೋಽನುವಾಕಃ ॥

ವಿಜ್ಞಾನವು[1] ಬ್ರಹ್ಮ ಎಂದು ತಿಳಿದುಕೊಂಡನು; ಏಕೆಂದರೆ ವಿಜ್ಞಾನದಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ, ಹುಟ್ಟಿದವುಗಳು ವಿಜ್ಞಾನದಿಂದ ಜೀವಿಸುತ್ತವೆ ಮತ್ತು ವಿಜ್ಞಾನವನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಅದನ್ನು ಅರಿತುಕೊಂಡು (ಭೃಗುವು), 'ಹೇ ಭಗವಂತನೆ, ಬ್ರಹ್ಮವನ್ನು ಉಪದೇಶಿಸು' ಎಂದು (ಹೇಳುತ್ತ) ಪುನಃ ತಂದೆಯಾದ ವರುಣನನ್ನು ಸಮೀಪಿಸಿದನು. (ವರುಣನು) ಅವನನ್ನು ಕುರಿತು ಹೇಳಿದನು. ತಪಸ್ಸಿನಿಂದ ಬ್ರಹ್ಮವನ್ನು ತಿಳಿದುಕೊ; ತಪಸ್ಸು ಬ್ರಹ್ಮವು' ಅವನು ತಪಸ್ಸನ್ನು ಮಾಡಿದನು. ಅವನು ತಪಸ್ಸನ್ನು ಮಾಡಿ—

[[1]ಅಧ್ಯವಸಾಯ-ಶಕ್ತಿವಿಶಿಷ್ಟನಾದ ಹಿರಣ್ಯಗರ್ಭ.]

## ಆರನೆಯ ಅನುವಾಕ

**ಆನಂದೋ ಬ್ರಹ್ಮೇತಿ ವ್ಯಜಾನಾತ್ । ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಆನಂದೇನ ಜಾತಾನಿ ಜೀವಂತಿ । ಆನಂದಂ ಪ್ರಯಂತ್ಯಭಿಸಂವಿಶಂತೀತಿ । ಸೈಷಾ ಭಾರ್ಗವೀ ವಾರುಣೀ ವಿದ್ಯಾ । ಪರಮೇ ವ್ಯೋಮನ್ ಪ್ರತಿಷ್ಠಿತಾ । ಸ ಯ ಏವಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ । ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ಇತಿ ಷಷ್ಠೋಽನುವಾಕಃ ॥**

ಸಾ ಏಷಾ = ಆ ಈ ಭಾರ್ಗವೀ ವಾರುಣೀ ವಿದ್ಯಾ = ಭಾರ್ಗವೀ ವಾರುಣೀ ವಿದ್ಯೆಯು ಪರಮೇ ವ್ಯೋಮನ್ = ಪರಮವ್ಯೋಮದಲ್ಲಿ ಪ್ರತಿಷ್ಠಿತಾ = ಪ್ರತಿಷ್ಠಿತವಾಗಿರುವುದು. ಯಃ = ಯಾವನು ಏವಂ = ಹೀಗೆ ವೇದ = ತಿಳಿದುಕೊಳ್ಳುವನೊ ಸಃ = ಅವನು ಪ್ರತಿತಿಷ್ಠತಿ = ಪ್ರತಿಷ್ಠಿತನಾಗುತ್ತಾನೆ, ಅನ್ನವಾನ್ = ಅನ್ನವಂತನೂ ಅನ್ನಾದಃ = ಅನ್ನಾದನೂ ಭವತಿ = ಆಗುತ್ತಾನೆ; ಪ್ರಜಯಾ = ಪುತ್ರರಿಂದಲೂ ಪಶುಭಿಃ=ಪಶುಗಳಿಂದಲೂ ಬ್ರಹ್ಮವರ್ಚಸಾ=ಬ್ರಹ್ಮವರ್ಚಸ್ಸಿನಿಂದಲೂ ಮಹಾನ್ ಭವತಿ=ಮಹಾನ್ ಆಗುತ್ತಾನೆ, ಕೀರ್ತ್ಯಾ ಮಹಾನ್ [ಭವತಿ]=ಕೀರ್ತಿಯಿಂದಲೂ ಮಹಾನ್ ಆಗುತ್ತಾನೆ.

ಆನಂದವು[೧] ಬ್ರಹ್ಮ ಎಂದು ತಿಳಿದುಕೊಂಡನು. ಏಕೆಂದರೆ ಆನಂದದಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ. ಹುಟ್ಟಿದವುಗಳು ಆನಂದದಿಂದ ಜೀವಿಸುತ್ತವೆ ಮತ್ತು ಆನಂದವನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಆ ಈ ಭಾರ್ಗವೀ ವಾರುಣೀ ವಿದ್ಯೆಯು[೨] ಪರಮವ್ಯೋಮದಲ್ಲಿ[೩] ಪ್ರತಿಷ್ಠಿತವಾಗಿರುವುದು.[೪] ಯಾವನು ಹೀಗೆ ತಿಳಿದುಕೊಳ್ಳುವನೊ ಅವನು ಪ್ರತಿಷ್ಠಿತನಾಗುತ್ತಾನೆ, ಅನ್ನವಂತನೂ ಅನ್ನಾದನೂ[೫] ಆಗುತ್ತಾನೆ; ಪುತ್ರರಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ[೬] ಮಹಾನ್ ಆಗುತ್ತಾನೆ. ಕೀರ್ತಿಯಿಂದಲೂ[೭] ಮಹಾನ್ ಆಗುತ್ತಾನೆ.

[ಈ ರೀತಿ ಭೃಗುವು ತಪಸ್ಸಿನಿಂದ ವಿಶುದ್ಧಾತ್ಮನಾಗಿ ಪ್ರಾಣಾದಿಗಳಲ್ಲಿ ಬ್ರಹ್ಮದ ಲಕ್ಷಣವನ್ನು ಪೂರ್ಣವಾಗಿ ಕಾಣದೆ ಮೆಲ್ಲಮೆಲ್ಲಗೆ ಒಳಗೆ ಪ್ರವೇಶಿಸಿ ಅಂತರತಮ

ವಾದ ಆನಂದವೇ ಬ್ರಹ್ಮವೆಂದು ತಪಸ್ಸಾಧನದಿಂದಲೇ ತಿಳಿದುಕೊಂಡನು. ಆದುದರಿಂದ ಜಿಜ್ಞಾಸುವು ಬಾಹ್ಯಾಂತಃಕರಣ-ಸಮಾಧಾನರೂಪವಾದ ತಪಸ್ಸೆಂಬ ಸಾಧನವನ್ನು ಅನುಷ್ಠಿಸಬೇಕು ಎಂಬುದು ಈ ಪ್ರಕರಣದ ಅರ್ಥ.

೧ ಮಾಯೆಯಿಂದ ವಿಶಿಷ್ಟವಾದ ಬ್ರಹ್ಮ.

೨ ವರುಣನು ಉಪದೇಶಿಸಿದ, ಭೃಗುವು ತಿಳಿದುಕೊಂಡ ವಿದ್ಯೆ.

೩ ಹೃದಯಾಕಾಶದ ಗುಹೆಯಲ್ಲಿರುವ ಅದ್ವೈತಪರಮಾನಂದದಲ್ಲಿ.

೪ ಅನ್ನಮಯನಿಂದ ಹೊರಟು ಆನಂದಮಯನಲ್ಲಿ ಪರಿಸಮಾಪ್ತವಾಯಿತು.

೫ ಅನ್ನವನ್ನು ತಿಂದು ಅರಗಿಸಿಕೊಳ್ಳುವ ಶಕ್ತಿಯುಳ್ಳವನಾಗುತ್ತಾನೆ.

೬ ಶಮದಮಜ್ಞಾನಾದಿಗಳಿಂದ ಉಂಟಾಗುವ ತೇಜಸ್ಸಿನಿಂದ.

೭ ಶುಭಾಚಾರನಿಮಿತ್ತದಿಂದ ಉಂಟಾಗುವ ಖ್ಯಾತಿಯಿಂದ.]

## ಏಳನೆಯ ಅನುವಾಕ

ಅನ್ನಂ ನ ನಿಂದ್ಯಾತ್ । ತದ್ವ್ರತಮ್ । ಪ್ರಾಣೋ ವಾ ಅನ್ನಮ್ । ಶರೀರಮನ್ನಾದಮ್ । ಪ್ರಾಣೇ ಶರೀರಂ ಪ್ರತಿಷ್ಠಿತಮ್ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ಇತಿ ಸಪ್ತಮೋಽನುವಾಕಃ ॥

ಅನ್ನಂ=ಅನ್ನವನ್ನು ನ ನಿಂದ್ಯಾತ್=ನಿಂದಿಸಕೂಡದು. ತತ್=ಅದು ವ್ರತಂ=ವ್ರತವು. ಪ್ರಾಣಃ ವೈ=ಪ್ರಾಣವೇ ಅನ್ನಂ=ಅನ್ನವು, ಶರೀರಂ=ಶರೀರವು ಅನ್ನಾದಂ=ಅನ್ನಾದವು. ಪ್ರಾಣೇ=ಪ್ರಾಣದಲ್ಲಿ ಶರೀರಂ=ಶರೀರವು ಪ್ರತಿಷ್ಠಿತಂ=ಪ್ರತಿಷ್ಠಿತವಾಗಿರುವುದು; ಶರೀರೇ=ಶರೀರದಲ್ಲಿ ಪ್ರಾಣಃ ಪ್ರತಿಷ್ಠಿತಃ=ಪ್ರಾಣವು ಪ್ರತಿಷ್ಠಿತವಾಗಿರುವುದು. ತತ್=ಆ ಏತತ್=ಈ ಅನ್ನಂ=ಅನ್ನವು ಅನ್ನೇ=ಅನ್ನದಲ್ಲಿ ಪ್ರತಿಷ್ಠಿತಂ=ಪ್ರತಿಷ್ಠಿತವಾಗಿರುವುದು. ಯಃ=ಯಾವನು ಏತತ್=ಈ ಅನ್ನಂ=ಅನ್ನವು ಅನ್ನೇ=ಅನ್ನದಲ್ಲಿ ಪ್ರತಿಷ್ಠಿತಂ=ಪ್ರತಿಷ್ಠಿತವಾಗಿರುವುದೆಂಬುದನ್ನು ವೇದ=ತಿಳಿದುಕೊಳ್ಳುವನೊ ಸಃ=ಅವನು ಪ್ರತಿತಿಷ್ಠತಿ=ಪ್ರತಿಷ್ಠಿತನಾಗುತ್ತಾನೆ. ಅನ್ನವಾನ್ ಅನ್ನಾದಃ ಭವತಿ; ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ ಮಹಾನ್ ಭವತಿ; ಕೀರ್ತ್ಯಾ ಮಹಾನ್ [ಭವತಿ].

ಅನ್ನವನ್ನು ನಿಂದಿಸಕೂಡದು.[೧] ಅದು ವ್ರತ.[೨] ಪ್ರಾಣವೇ ಅನ್ನವು,[೩] ಶರೀರವು ಅನ್ನಾದವು. ಪ್ರಾಣದಲ್ಲಿ ಶರೀರವು ಪ್ರತಿಷ್ಠಿತವಾಗಿರುವುದು;[೪] ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿರುವುದು. ಆ ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದು.[೫] ಯಾವನು ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದೆಂಬುದನ್ನು ತಿಳಿದುಕೊಳ್ಳುವನೊ ಅವನು ಪ್ರತಿಷ್ಠಿತನಾಗುತ್ತಾನೆ.[೬] ಅನ್ನವಂತನೂ ಅನ್ನಾದನೂ ಆಗುತ್ತಾನೆ; ಪುತ್ರರಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಮಹಾನ್ ಆಗುತ್ತಾನೆ, ಕೀರ್ತಿಯಿಂದಲೂ ಮಹಾನ್ ಆಗುತ್ತಾನೆ.

[೧ ಅನ್ನವು ಬ್ರಹ್ಮಜ್ಞಾನಕ್ಕೆ ದ್ವಾರವಾಗಿರುವುದರಿಂದ ಅದನ್ನು ನಿಂದಿಸಕೂಡದು.

೨ ವ್ರತ ಎಂದು ಹೇಳಿರುವುದು ಸ್ತುತಿಗಾಗಿ.

೩ ಪ್ರಾಣವು ಶರೀರದ ಒಳಗೆ ಇರುವುದರಿಂದ.

೪ ಪ್ರಾಣನಿಮಿತ್ತದಿಂದ ಶರೀರವು ನಿಂತಿರುತ್ತದೆ. ಆದುದರಿಂದ ಶರೀರವು ಅನ್ನವಾಗುವುದು, ಪ್ರಾಣವು ಅನ್ನಾದವಾಗುವುದು.

೫ ಒಂದು ಇನ್ನೊಂದರಲ್ಲಿ ಇರುವುದರಿಂದ ಅನ್ನ, ಒಂದು ಇನ್ನೊಂದಕ್ಕೆ ಆಶ್ರಯುವಾಗಿರುವುದರಿಂದ ಅನ್ನಾದ. ಹೀಗೆ ಪ್ರಾಣಶರೀರಗಳೆರಡೂ ಅನ್ನವೂ ಅನ್ನಾದವೂ ಆಗಿರುತ್ತವೆ.

೬ ಅನ್ನ ಮತ್ತು ಅನ್ನಾದ ಇವುಗಳ ರೂಪದಿಂದ.]

## ಎಂಟನೆಯ ಅನುವಾಕ

ಅನ್ನಂ ನ ಪರಿಚಕ್ಷೀತ । ತದ್ವ್ರತಮ್ । ಆಪೋ ವಾ ಅನ್ನಮ್ । ಜ್ಯೋತಿರನ್ನಾದಮ್ । ಅಪ್ಸು ಜ್ಯೋತಿಃ ಪ್ರತಿಷ್ಠಿತಮ್ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನ-ನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮ-ವರ್ಚಸೇನ । ಮಹಾನ್ ಕೀರ್ತ್ಯಾ ॥ ಇತಿ ಅಷ್ಟಮೋಽನುವಾಕಃ ॥

ಅನ್ನಂ = ಅನ್ನವನ್ನು ನ ಪರಿಚಕ್ಷೀತ = ನಿರಾಕರಿಸಕೂಡದು. ತತ್ ವ್ರತಂ = ಅದು ವ್ರತವು. ಆಪಃ ವೈ = ನೀರೇ ಅನ್ನಂ = ಅನ್ನವು, ಜ್ಯೋತಿಃ = ಜ್ಯೋತಿಯು ಅನ್ನಾದಂ = ಅನ್ನಾದವು. ಅಪ್ಸು = ನೀರಿನಲ್ಲಿ ಜ್ಯೋತಿಃ ಪ್ರತಿಷ್ಠಿತಂ = ಜ್ಯೋತಿಯು ಪ್ರತಿಷ್ಠಿತವಾಗಿರುವುದು; ಜ್ಯೋತಿಷಿ = ಜ್ಯೋತಿಯಲ್ಲಿ ಆಪಃ = ನೀರು ಪ್ರತಿಷ್ಠಿತಾಃ = ಪ್ರತಿಷ್ಠಿತವಾಗಿರುವುದು. [ಮುಂದಿನ ಭಾಗ ಹಿಂದಿನ ಅನುವಾಕದಂತೆಯೇ.]

ಅನ್ನವನ್ನು ನಿರಾಕರಿಸಕೂಡದು.[1] ಅದು ವ್ರತ. ನೀರೇ ಅನ್ನವು, ಜ್ಯೋತಿಯು ಅನ್ನಾದವು. ನೀರಿನಲ್ಲಿ ಜ್ಯೋತಿಯು ಪ್ರತಿಷ್ಠಿತವಾಗಿರುವುದು; ಜ್ಯೋತಿಯಲ್ಲಿ ನೀರು ಪ್ರತಿಷ್ಠಿತವಾಗಿರುವುದು. ಆ ಈ ಅನ್ನವು ಅನ್ನವಲ್ಲಿ ಪ್ರತಿಷ್ಠಿತವಾಗಿರುವುದು. ಯಾವನು ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತ ವಾಗಿರುವುದೆಂಬುದನ್ನು ತಿಳಿದುಕೊಳ್ಳುವನೊ ಅವನು ಪ್ರತಿಷ್ಠಿತನಾಗುತ್ತಾನೆ, ಅನ್ನವಂತನೂ ಅನ್ನಾದನೂ ಆಗುತ್ತಾನೆ; ಪುತ್ರರಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಮಹಾನ್ ಆಗುತ್ತಾನೆ, ಕೀರ್ತಿಯಿಂದಲೂ ಮಹಾನ್ ಆಗುತ್ತಾನೆ.

[[1] ಒಳ್ಳೆಯ ಅನ್ನ, ಕೆಟ್ಟ ಅನ್ನ ಎಂಬ ಕಲ್ಪನೆಯಿಲ್ಲದಿದ್ದರೆ ಅದನ್ನು ದೊಡ್ಡದಾಗಿ ಮಾಡಿದಂತೆ ಆಗುತ್ತದೆ.]

# ಒಂಬತ್ತನೆಯ ಅನುವಾಕ

ಅನ್ನಂ ಬಹು ಕುರ್ವೀತ । ತದ್ವ್ರತಮ್ । ಪೃಥಿವೀ ವಾ ಅನ್ನಮ್ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ಇತಿ ನವಮೋಽನುವಾಕಃ ॥

ಅನ್ನಂ = ಅನ್ನವನ್ನು ಬಹು = ಬಹುವಾಗಿ ಕುರ್ವೀತ = ಮಾಡಬೇಕು ತತ್ = ಅದು ವ್ರತಂ = ವ್ರತವು. ಪೃಥಿವೀ ವೈ = ಪೃಥಿವಿಯೇ ಅನ್ನಂ = ಅನ್ನವು, ಆಕಾಶಃ = ಆಕಾಶವು ಅನ್ನಾದಃ = ಅನ್ನಾದವು. ಪೃಥಿವ್ಯಾಂ = ಪೃಥಿವಿಯಲ್ಲಿ ಆಕಾಶಃ = ಆಕಾಶವು ಪ್ರತಿಷ್ಠಿತಃ=ಪ್ರತಿಷ್ಠಿತವಾಗಿರುವುದು; ಆಕಾಶೇ=ಆಕಾಶದಲ್ಲಿ ಪೃಥಿವೀ= ಪೃಥಿವಿಯು ಪ್ರತಿಷ್ಠಿತಾ = ಪ್ರತಿಷ್ಠಿತವಾಗಿರುವುದು. [ಮುಂದಿನ ಭಾಗ ಹಿಂದಿನ ಅನುವಾಕದಂತೆಯೇ.]

ಅನ್ನವನ್ನು ಬಹುವಾಗಿ ಮಾಡಬೇಕು.[1] ಅದು ವ್ರತ. ಪೃಥಿವಿಯೇ ಅನ್ನವು, ಆಕಾಶವೇ ಅನ್ನಾದವು. ಪೃಥಿವಿಯಲ್ಲಿ ಆಕಾಶವು ಪ್ರತಿಷ್ಠಿತವಾಗಿರುವುದು; ಆಕಾಶದಲ್ಲಿ ಪೃಥಿವಿಯು ಪ್ರತಿಷ್ಠಿತವಾಗಿರುವುದು. ಆ ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದು. ಯಾವನು ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದೆಂಬುದನ್ನು ತಿಳಿದುಕೊಳ್ಳುವನೊ ಅವನು ಪ್ರತಿಷ್ಠಿತನಾಗುತ್ತಾನೆ, ಅನ್ನವಂತನೂ ಅನ್ನಾದನೂ ಆಗುತ್ತಾನೆ; ಪುತ್ರರಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಮಹಾನ್ ಆಗುತ್ತಾನೆ, ಕೀರ್ತಿಯಿಂದಲೂ ಮಹಾನ್ ಆಗುತ್ತಾನೆ.

[[1] ಅಭ್ಯಾಗತರಿಗೆ ದಾನಮಾಡಲು.]

## ಹತ್ತನೆಯ ಅನುವಾಕ

ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ವ್ರತಮ್ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನಗ್ಂ ರಾದ್ಧಮ್ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಮಧ್ಯತೋಽನ್ನಗ್ಂ ರಾದ್ಧಮ್ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಅಂತತೋಽನ್ನಗ್ಂ ರಾದ್ಧಮ್ । ಅಂತತೋಽಸ್ಮಾ ಅನ್ನಗ್ಂ ರಾಧ್ಯತೇ । ಯ ಏವಂ ವೇದ । ಕ್ಷೇಮ ಇತಿ ವಾಚಿ । ಯೋಗಕ್ಷೇಮ ಇತಿ ಪ್ರಾಣಾಪಾನಯೋಃ । ಕರ್ಮೇತಿ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿ ಪಾಯೌ । ಇತಿ ಮಾನುಷೀಃ ಸಮಾಜ್ಞಾಃ । ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ । ಯಶ ಇತಿ ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತಮಾನಂದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ । ತತ್ ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ ಭವತಿ । ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿ ಯೇಽಪ್ರಿಯಾ ಭ್ರಾತೃವ್ಯಾಃ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂವಿತ್ ।

ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪ-ಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ । ಏತಂ ವಿಜ್ಞಾನಮಯ-ಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪ-ಸಂಕ್ರಮ್ಯ । ಇಮಾಂಲ್ಲೋಕಾನ್ ಕಾಮಾನ್ನೀ ಕಾಮರೂಪ್ಯನು-ಸಂಚರನ್ । ಏತತ್ ಸಾಮ ಗಾಯನ್ನಾಸ್ತೇ । ಹಾ೩ವು ಹಾ೩ವು ಹಾ೩ವು । ಅಹಮನ್ನಮಹಮನ್ನಮಹಮನ್ನಮ್ । ಅಹಮನ್ನಾ-ದೋ೩ಽಹಮನ್ನಾದೋ೩ಽಹಮನ್ನಾದಃ । ಅಹಗ್ಂ ಶ್ಲೋಕಕೃ-ದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥ-ಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋ ಅಮೃತಸ್ಯ ನಾ೩ಭಾಯಿ । ಯೋ ಮಾ ದದಾತಿ ಸ ಇದೇವ ಮಾ೩ವಾಃ । ಅಹಮನ್ನಮನ್ನಮದಂತಮಾ೩ದ್ಮಿ । ಅಹಂ ವಿಶ್ವಂ ಭುವನಮಭ್ಯ-ಭವಾ೩ಮ್ । ಸುವರ್ನ ಜ್ಯೋತೀಃ । ಯ ಏವಂ ವೇದ । ಇತ್ಯು-ಪನಿಷತ್ ॥ ಇತಿದಶಮೋಽನುವಾಕಃ ॥

ವಸತೌ = ವಸತಿಗಾಗಿ ಕಂಚನ = ಯಾರನ್ನೂ ನ ಪ್ರತ್ಯಾಚಕ್ಷೀತ=ನಿರಾಕರಿಸ ಕೂಡದು. ತತ್ ವ್ರತಂ = ಅದು ವ್ರತ. ತಸ್ಮಾತ್ = ಆದುದರಿಂದ ಯಯಾ ಕಯಾ ಚ ವಿಧಯಾ = ಯಾವ ವಿಧದಿಂದಾದರೂ ಬಹು ಅನ್ನಂ = ಬಹು ಅನ್ನವನ್ನು ಪ್ರಾಪ್ನುಯಾತ್ = ಸಂಗ್ರಹಿಸಬೇಕು. ಅಸ್ಮೈ = ಇವನಿಗೆ ಅನ್ನಂ = ಅನ್ನವು ಅರಾಧಿ = ಸಿದ್ಧವಾಗಿರುವುದು ಇತಿ = ಎಂದು ಆಚಕ್ಷತೇ = ಹೇಳುತ್ತಾರೆ. ಏತತ್ ವೈ = ಈ ಅನ್ನಂ = ಅನ್ನವು ಮುಖತಃ = ಮುಖ್ಯವಾಗಿ ರಾದ್ಧಂ = ಸಿದ್ಧವಾದರೆ ಅಸ್ಮೈ = ಇವನಿಗೆ ಮುಖತಃ = ಮುಖ್ಯವಾಗಿ ಅನ್ನಂ = ಅನ್ನವು ರಾಧ್ಯತೇ = ಸಿದ್ಧವಾಗುತ್ತದೆ; ಏತತ್ ವೈ ಅನ್ನಂ ಮಧ್ಯತಃ ರಾದ್ಧಂ = ಇದೇ ಅನ್ನವು ಮಧ್ಯಮೋಪಚಾರದಿಂದ ಸಿದ್ಧವಾದರೆ ಅಸ್ಮೈ ಮಧ್ಯತಃ ಅನ್ನಂ ರಾಧ್ಯತೇ=ಇವನಿಗೆ ಮಧ್ಯಮೋಪಚಾರದಿಂದ ಅನ್ನವು ಸಿದ್ಧವಾಗುತ್ತದೆ. ಏತತ್ ವೈ ಅನ್ನಂ ಅಂತತಃ ರಾದ್ಧಂ=ಇದೇ

ಅನ್ನವು ಅಧಮೋಪಚಾರದಿಂದ ಸಿದ್ಧವಾದರೆ **ಅಸ್ಮೈ ಅನ್ನಂ ಅಂತತಃ ರಾಧ್ಯತೇ**= ಇವನಿಗೆ ಅನ್ನವು ಅಧಮೋಪಚಾರದಿಂದ ಸಿದ್ಧವಾಗುತ್ತದೆ. **ಯಃ ಏವಂ ವೇದ**= ಯಾವನು ಹೀಗೆ ಅರಿಯುತ್ತಾನೆಯೊ [**ತಸ್ಯ ತಾದೃಶಂ ಫಲಂ ಉಪನಮೇತ್**= ಅವನಿಗೆ ಅಂತಹ ಫಲವೇ ಉಂಟಾಗುವುದು].

ವಸತಿಗಾಗಿ ಯಾವನಾದರೂ ಬಂದರೆ ಅವನನ್ನು ನಿರಾಕರಿಸಕೂಡದು.[೧] ಅದು ವ್ರತ. ಆದುದರಿಂದ ಯಾವ ವಿಧದಿಂದಾದರೂ ಬಹು ಅನ್ನವನ್ನು ಸಂಗ್ರಹಿಸಬೇಕು. 'ಇವನಿಗೆ ಅನ್ನವು ಸಿದ್ಧವಾಗಿದೆ'—ಎಂದು (ವಿದ್ವಾಂಸರು) ಹೇಳುತ್ತಾರೆ. ಈ ಅನ್ನವು[೨] ಮುಖ್ಯವಾಗಿ ಸಿದ್ಧವಾದರೆ ಇವನಿಗೆ ಅನ್ನವು ಮುಖ್ಯವಾಗಿ ಸಿದ್ಧವಾಗುತ್ತದೆ. ಇದೇ ಅನ್ನವು ಮಧ್ಯಮೋಪಚಾರದಿಂದ ಸಿದ್ಧವಾದರೆ ಇವನಿಗೆ ಅನ್ನವು ಮಧ್ಯಮೋಪಚಾರದಿಂದ ಸಿದ್ಧವಾಗುತ್ತದೆ. ಇದೇ ಅನ್ನವು ಅಧಮೋಪಚಾರದಿಂದ ಸಿದ್ಧವಾದರೆ ಇವನಿಗೆ ಅನ್ನವು ಅಧಮೋಪಚಾರದಿಂದ ಸಿದ್ಧವಾಗುತ್ತದೆ. ಯಾವನು ಹೀಗೆ ಅರಿಯುತ್ತಾನೆಯೊ (ಅವನು ಅಂತಹ ಫಲವನ್ನೇ ಹೊಂದುತ್ತಾನೆ).

[೧ ವಾಸಸ್ಥಾನವನ್ನು ಕೊಟ್ಟು ಅವಶ್ಯವಾಗಿ ಊಟಮಾಡಿಸಬೇಕು.
೨ ಅನ್ನದಾನಮಾಹಾತ್ಮ್ಯವನ್ನು ಶ್ರುತಿ ಹೇಳುತ್ತದೆ. ಯಾರು ಹೇಗೆ ಅನ್ನದಾನ ಮಾಡುತ್ತಾರೆಯೊ ಅವರಿಗೆ ಫಲವು ಹಾಗೆಯೇ ಉಂಟಾಗುತ್ತದೆ. ಮುಖತಃ ಎಂದರೆ ಮೊದಲನೆಯ ವಯಸ್ಸಿನಲ್ಲಿ ಅಥವಾ ಪೂಜಾಪುರಃಸರವಾಗಿ; ಹೀಗೆಯೇ ಮಧ್ಯತಃ, ಅಂತತಃ ಎಂಬ ಶಬ್ದಗಳಿಗೆ ಮಧ್ಯವಯಸ್ಸಿನಲ್ಲಿ ಕೊನೆಯ ವಯಸ್ಸಿನಲ್ಲಿ ಎಂದು ಅರ್ಥವನ್ನು ಕಲ್ಪಿಸಬೇಕು.]

**ವಾಚಿ**=ವಾಕ್ಕಿನಲ್ಲಿ **ಕ್ಷೇಮಃ** ಇತಿ=ಕ್ಷೇಮವೆಂದು, **ಪ್ರಾಣಾಪಾನಯೋಃ**= ಪ್ರಾಣಾಪಾನಗಳಲ್ಲಿ **ಯೋಗಕ್ಷೇಮಃ** ಇತಿ = ಯೋಗಕ್ಷೇಮವೆಂದು, **ಹಸ್ತಯೋಃ**= ಕೈಗಳಲ್ಲಿ **ಕರ್ಮ** ಇತಿ = ಕರ್ಮವೆಂದು, **ಪಾದಯೋಃ** = ಕಾಲುಗಳಲ್ಲಿ **ಗತಿಃ** ಇತಿ= ಗತಿಯೆಂದು **ಪಾಯೌ**=ಪಾಯುವಿನಲ್ಲಿ **ವಿಮುಕ್ತಿಃ** ಇತಿ=ಬಿಡುವಿಕೆ ಎಂದು[**ಬ್ರಹ್ಮ**= ಬ್ರಹ್ಮವನ್ನು **ಉಪಾಸೀತ**=ಉಪಾಸಿಸಬೇಕು]; **ಇತಿ**=ಹೀಗೆ **ಮಾನುಷೀಃ**=ಮನುಷ್ಯ ಸಂಬಂಧವಾದ **ಸಮಾಜ್ಞಾಃ**=ಉಪಾಸನೆಗಳು.

**ಅಥ**=ಇನ್ನು **ದೈವೀಃ**=ದೇವತಾಸಂಬಂಧವಾದ [**ಸಮಾಜ್ಞಾಃ**=ಉಪಾಸನೆಗಳು] **ವೃಷ್ಟೌ**=ಮಳೆಯಲ್ಲಿ **ತೃಪ್ತಿಃ** ಇತಿ = ತೃಪ್ತಿ ಎಂದು, **ವಿದ್ಯುತಿ** = ಮಿಂಚಿನಲ್ಲಿ **ಬಲಂ** ಇತಿ=ಬಲವೆಂದು, **ಪಶುಷು** = ಪಶುಗಳಲ್ಲಿ **ಯಶಃ** ಇತಿ = ಯಶಸ್ಸೆಂದು, **ನಕ್ಷತ್ರೇಷು** = ನಕ್ಷತ್ರಗಳಲ್ಲಿ **ಜ್ಯೋತಿಃ** ಇತಿ = ಜ್ಯೋತಿಯೆಂದು **ಉಪಸ್ಥೇ** = ಉಪಸ್ಥದಲ್ಲಿ **ಪ್ರಜಾತಿಃ**=ಸಂತಾನ, **ಅಮೃತಂ**=ಅಮೃತತ್ವಪ್ರಾಪ್ತಿ, **ಆನಂದಃ**=ಆನಂದ ಇತಿ=

ಎಂದು, **ಆಕಾಶೇ**=ಆಕಾಶದಲ್ಲಿ **ಸರ್ವಂ ಇತಿ**=ಎಲ್ಲವೂ ಎಂದು [ಬ್ರಹ್ಮವನ್ನು ಉಪಾಸಿಸಬೇಕು].

**ತತ್**=ಅದು **ಪ್ರತಿಷ್ಠಾ ಇತಿ**=ಪ್ರತಿಷ್ಠೆಯೆಂದು **ಉಪಾಸೀತ**=ಉಪಾಸಿಸಬೇಕು, **ಪ್ರತಿಷ್ಠಾವಾನ್ ಭವತಿ**=ಪ್ರತಿಷ್ಠಾವಂತನಾಗುತ್ತಾನೆ. **ತತ್**=ಅದು **ಮಹಃ ಇತಿ ಉಪಾಸೀತ**=ಮಹತ್ ಎಂದು ಉಪಾಸಿಸಬೇಕು, **ಮಹಾನ್ ಭವತಿ**=ಮಹಾನ್ ಆಗುತ್ತಾನೆ. **ತತ್ ಮನಃ ಇತಿ ಉಪಾಸೀತ**=ಅದು ಮನನವೆಂದು ಉಪಾಸಿಸಬೇಕು, **ಮಾನವಾನ್ ಭವತಿ**=ಮನನಮಾಡಲು ಸಮರ್ಥನಾಗುತ್ತಾನೆ. **ತತ್ ನಮಃ ಇತಿ ಉಪಾಸೀತ**=ಅದು ನಮಸ್ಕಾರವೆಂದು ಉಪಾಸಿಸಬೇಕು, **ಅಸ್ಮೈ**=ಇವನಿಗೆ **ಕಾಮಾಃ**=ಭೋಗ್ಯವಸ್ತುಗಳು **ನಮ್ಯಂತೇ**=ನಮಿಸುವುವು. **ತತ್ ಬ್ರಹ್ಮ ಇತಿ ಉಪಾಸೀತ**=ಅದು ಬ್ರಹ್ಮವೆಂದು ಉಪಾಸಿಸಬೇಕು, **ಬ್ರಹ್ಮವಾನ್ ಭವತಿ**=ಬ್ರಹ್ಮವಂತನಾಗುತ್ತಾನೆ. **ತತ್**=ಅದು **ಬ್ರಹ್ಮಣಃ**=ಬ್ರಹ್ಮದ **ಪರಿಮರಃ ಇತಿ**=ಸಂಹಾರಸಾಧನವೆಂದು **ಉಪಾಸೀತ**=ಉಪಾಸಿಸಬೇಕು, **ಏಣಂ** [ಏನಂ]=ಇವನನ್ನು **ದ್ವಿಷಂತಃ**=ದ್ವೇಷಿಸುವ **ಸಪತ್ನಾಃ**=ಶತ್ರುಗಳು **ಪರಿಮ್ರಿಯಂತೇ**=ಸಾಯುತ್ತಾರೆ; **ಯೇ**=ಯಾರು **ಅಪ್ರಿಯಾಃ**=ಅಪ್ರಿಯರಾದ **ಭ್ರಾತೃವ್ಯಾಃ**=ಶತ್ರುಗಳೂ [ಅವರೂ] **ಪರಿ** [**ಮ್ರಿಯಂತೇ**]=ಸಾಯುತ್ತಾರೆ.

ವಾಕ್ಕಿನಲ್ಲಿ ಕ್ಷೇಮವೆಂದೂ, ಪ್ರಾಣಾಪಾನಗಳಲ್ಲಿ ಯೋಗಕ್ಷೇಮವೆಂದೂ, ಕೈಗಳಲ್ಲಿ ಕರ್ಮವೆಂದೂ, ಕಾಲುಗಳಲ್ಲಿ ಗತಿಯೆಂದೂ, ಪಾಯುವಿನಲ್ಲಿ ಬಿಡುವಿಕೆಯೆಂದೂ (ಬ್ರಹ್ಮವನ್ನು ಉಪಾಸಿಸಬೇಕು); ಹೀಗೆ ಮನುಷ್ಯಸಂಬಂಧವಾದ ಉಪಾಸನೆಗಳು.

ಇನ್ನು ದೇವತಾಸಂಬಂಧವಾದ ಉಪಾಸನೆಗಳು; ಮಳೆಯಲ್ಲಿ ತೃಪ್ತಿಯೆಂದೂ, ಮಿಂಚಿನಲ್ಲಿ ಬಲವೆಂದೂ, ಪಶುಗಳಲ್ಲಿ ಯಶಸ್ಸೆಂದೂ, ನಕ್ಷತ್ರಗಳಲ್ಲಿ ಜ್ಯೋತಿಯೆಂದೂ, ಉಪಸ್ಥದಲ್ಲಿ ಸಂತಾನ ಅಮೃತತ್ವಪ್ರಾಪ್ತಿ ಆನಂದ ಇವುಗಳೆಂದೂ, ಆಕಾಶದಲ್ಲಿ ಎಲ್ಲವೂ ಎಂದೂ[1] (ಬ್ರಹ್ಮವನ್ನು ಉಪಾಸಿಸಬೇಕು).

ಅದನ್ನು[2] ಪ್ರತಿಷ್ಠೆಯೆಂದು ಉಪಾಸಿಸಬೇಕು, ಪ್ರತಿಷ್ಠಾವಂತನಾಗುತ್ತಾನೆ. ಅದನ್ನು ಮಹತ್ ಎಂದು ಉಪಾಸಿಸಬೇಕು, ಮಹಾನ್ ಆಗುತ್ತಾನೆ. ಅದನ್ನು ಮನಸ್ಸೆಂದು ಉಪಾಸಿಸಬೇಕು, ಮನನಮಾಡಲು ಸಮರ್ಥನಾಗುತ್ತಾನೆ. ಅದನ್ನು ನಮಸ್ಕಾರವೆಂದು ಉಪಾಸಿಸಬೇಕು, ಇವನಿಗೆ ಭೋಗ್ಯವಸ್ತುಗಳು ನಮಿಸುವುವು. ಅದನ್ನು ಬ್ರಹ್ಮವೆಂದು ಉಪಾಸಿಸಬೇಕು, ಬ್ರಹ್ಮವಂತನಾಗುತ್ತಾನೆ. ಅದು[3] ಬ್ರಹ್ಮಕ್ಕೆ ಸಂಹಾರಸಾಧನವೆಂದು ಉಪಾಸಿಸ

ಬೇಕು; ಇವನನ್ನು ದ್ವೇಷಿಸುವ ಶತ್ರುಗಳು ಸಾಯುತ್ತಾರೆ, ಇವನ ಅಪ್ರಿಯರಾದ ಶತ್ರುಗಳೂ ಸಾಯುತ್ತಾರೆ.

[ಇಲ್ಲಿ ಕೇವಲ ವಾಕ್ಕಾಗಲಿ ಕ್ಷೇಮವಾಗಲಿ ಉಪಾಸನೆಗೆ ವಿಷಯವಲ್ಲ; ವಾಕ್ಕಿನಲ್ಲಿ ಕ್ಷೇಮರೂಪದಿಂದ ಬ್ರಹ್ಮವನ್ನು ಉಪಾಸಿಸಬೇಕು. ಹೀಗೆಯೇ ಇತರ ಸ್ಥಾನಗಳಲ್ಲಿ.

೧ ಆಕಾಶದಲ್ಲಿ ಎಲ್ಲವೂ ಇರುವುದರಿಂದ.

೨ ಆಕಾಶರೂಪವಾದ ಬ್ರಹ್ಮವನ್ನು.

೩ ವಾಯುರೂಪವಾದ ಆಕಾಶ. ಇದರಲ್ಲಿ ಮಿಂಚು, ಮಳೆ, ಚಂದ್ರ, ಆದಿತ್ಯ, ಅಗ್ನಿ ಎಂಬ ಐದು ದೇವತೆಗಳು ಲಯವನ್ನು ಹೊಂದುತ್ತಾರೆ.]

**ಯಃ** = ಯಾವ **ಸಃ ಚ ಅಯಂ** = ಆ ಇವನು **ಪುರುಷೇ** = ಪುರುಷನಲ್ಲಿರುವನೊ **ಚ** = ಮತ್ತು **ಯಃ ಅಸೌ** = ಯಾವ ಅವನು **ಆದಿತ್ಯೇ** = ಆದಿತ್ಯನಲ್ಲಿರುವನೊ **ಸಃ ಏಕಃ** = ಅವನು ಒಬ್ಬನೇ. **ಯಃ** = ಯಾವನು **ಏವಂವಿತ್** = ಹೀಗೆ ತಿಳಿದುಕೊಳ್ಳುತ್ತಾನೆಯೊ **ಸಃ** = ಅವನು **ಅಸ್ಮಾತ್ ಲೋಕಾತ್** = ಈ ಲೋಕದಿಂದ **ಪ್ರೇತ್ಯ** = ಹೊರಟುಹೋಗಿ **ಏತಂ** = ಈ **ಅನ್ನಮಯಂ ಆತ್ಮಾನಂ** = ಅನ್ನಮಯನೆಂಬ ಆತ್ಮನನ್ನು **ಉಪಸಂಕ್ರಮ್ಯ** = ಹೊಂದಿ, **ಏತಂ ಪ್ರಾಣಮಯಂ ಆತ್ಮಾನಂ ಉಪಸಂಕ್ರಮ್ಯ, ಏತಂ ಮನೋಮಯಂ ಆತ್ಮಾನಂ ಉಪಸಂಕ್ರಮ್ಯ, ಏತಂ ವಿಜ್ಞಾನಮಯಂ ಆತ್ಮಾನಂ ಉಪಸಂಕ್ರಮ್ಯ, ಏತಂ ಆನಂದಮಯಂ ಆತ್ಮಾನಂ ಉಪಸಂಕ್ರಮ್ಯ, ಕಾಮಾನ್ನೀ** = ಯಥೇಚ್ಛ ಅನ್ನಶಾಲಿಯಾಗಿ **ಕಾಮರೂಪೀ** = ಯಥೇಚ್ಛ ರೂಪಶಾಲಿಯಾಗಿ **ಇಮಾನ್** = ಈ **ಲೋಕಾನ್** = ಲೋಕಗಳನ್ನು **ಅನುಸಂಚರನ್** = ಸಂಚರಿಸುತ್ತ **ಏತತ್ ಸಾಮ** = ಈ ಸಾಮವನ್ನು **ಗಾಯನ್ ಆಸ್ತೇ** = ಹಾಡುತ್ತ ಇರುವನು— **ಹಾ೩ವು ಹಾ೩ವು ಹಾ೩ವು** = ಅಹೋ ಅಹೋ ಅಹೋ! **ಅಹಂ ಅನ್ನಂ** = ನಾನು ಅನ್ನ, **ಅಹಂ ಅನ್ನಂ, ಅಹಂ ಅನ್ನಂ; ಅಹಂ ಅನ್ನಾದಃ** = ನಾನು ಅನ್ನಾದನು, **ಅಹಂ ಅನ್ನಾದಃ, ಅಹಂ ಅನ್ನಾದಃ; ಅಹಂ ಶ್ಲೋಕಕೃತ್** = ನಾನು ಶ್ಲೋಕಕರ್ತೃ, **ಅಹಂ ಶ್ಲೋಕಕೃತ್, ಅಹಂ ಶ್ಲೋಕ-ಕೃತ್; ಅಹಂ** = ನಾನು **ಋತಸ್ಯ** = ಋತಕ್ಕೆ **ಪ್ರಥಮಜಾಃ ಅಸ್ಮಿ** = ಮೊದಲು ಹುಟ್ಟಿದವನಾಗಿರುತ್ತೇನೆ [**ಚ** = ಮತ್ತು] **ದೇವೇಭ್ಯಃ** = ದೇವತೆಗಳಿಗಿಂತ **ಪೂರ್ವಂ** = ಮೊದಲು [ಇರುತ್ತೇನೆ]; **ಅಮೃತಸ್ಯ** = ಅಮೃತದ **ನಾ೩ಭಾಯಿ** [**ನಾಭಿಃ**]= ಮಧ್ಯ. **ಯಃ** = ಯಾವನು **ಮಾ** = ನನ್ನನ್ನು **ದದಾತಿ** = ಕೊಡುತ್ತಾನೆಯೊ **ಸಃ** = ಅವನು **ಇತ್ ಏವ** = ಹೀಗೆ **ಮಾ** = ನನ್ನನ್ನು **ಅವಾಃ** = ಕಾಪಾಡುತ್ತಾನೆ. **ಅಹಂ ಅನ್ನಂ** = ಅನ್ನರೂಪಿಯಾದ ನಾನು **ಅನ್ನಂ ಅದಂತಂ** = ಅನ್ನವನ್ನು ತಿನ್ನುವನನ್ನು **ಅದ್ಮಿ** = ತಿನ್ನುತ್ತೇನೆ. **ಅಹಂ** = ನಾನು **ವಿಶ್ವಂ** = ಸಮಸ್ತವಾದ **ಭುವನಂ** = ಭುವನವನ್ನು **ಅಭ್ಯ-ಭವಾಂ** = ಉಪಸಂಹರಿಸುತ್ತೇನೆ. [**ಅಹಂ** = ನಾನು] **ಸುವಃ ನ** = ಸೂರ್ಯನಂತೆ **ಜ್ಯೋತೀಃ** = ಜ್ಯೋತಿ. **ಯಃ ಏವಂ ವೇದ** = ಯಾವನು ಹೀಗೆ ಅರಿಯುತ್ತಾನೆಯೊ [**ಸಃ ಉಕ್ತಂ ಫಲಂ ಅಶ್ನುತೇ** = ಅವನು ಪೂರ್ವೋಕ್ತವಾದ ಫಲವನ್ನು ಹೊಂದುತ್ತಾನೆ.] **ಇತಿ** = ಹೀಗೆ **ಉಪನಿಷತ್** = ಉಪನಿಷತ್ತು.

ಯಾವ ಆ ಇವನು ಪುರುಷನಲ್ಲಿರುವನೊ, ಯಾವ ಅವನು ಆದಿತ್ಯನಲ್ಲಿರುವನೊ ಅವನು ಒಬ್ಬನೇ. ಯಾವನು ಹೀಗೆ ತಿಳಿದುಕೊಳ್ಳುವನೊ[೧] ಅವನು ಈ ಲೋಕದಿಂದ ಹೊರಟುಹೋಗಿ ಈ ಅನ್ನಮಯನೆಂಬ ಆತ್ಮನನ್ನು ಹೊಂದಿ, ಈ ಪ್ರಾಣಮಯನೆಂಬ ಆತ್ಮನನ್ನು ಹೊಂದಿ, ಈ ಮನೋಮಯನೆಂಬ ಆತ್ಮನನ್ನು ಹೊಂದಿ, ಈ ವಿಜ್ಞಾನಮಯನೆಂಬ ಆತ್ಮನನ್ನು ಹೊಂದಿ, ಈ ಆನಂದಮಯನೆಂಬ ಆತ್ಮನನ್ನು ಹೊಂದಿ,[೨] ಯಥೇಚ್ಛ ಅನ್ನಶಾಲಿಯಾಗಿ, ಯಥೇಚ್ಛ ರೂಪಶಾಲಿಯಾಗಿ, ಈ ಲೋಕಗಳಲ್ಲಿ[೩] ಸಂಚರಿಸುತ್ತ ಈ ಸಾಮವನ್ನು[೪] ಹಾಡುತ್ತ[೫] ಇರುವನು: 'ಅಹೋ! ಅಹೋ! ಅಹೋ![೬] ನಾನು ಅನ್ನ, ನಾನು ಅನ್ನ, ನಾನು ಅನ್ನ! ನಾನು ಅನ್ನಾದ, ನಾನು ಅನ್ನಾದ, ನಾನು ಅನ್ನಾದ! ನಾನು ಶ್ಲೋಕಕರ್ತೃ,[೭] ನಾನು ಶ್ಲೋಕಕರ್ತೃ, ನಾನು ಶ್ಲೋಕಕರ್ತೃ. ನಾನು ಋತಕ್ಕೆ[೮] ಮೊದಲು ಹುಟ್ಟಿರುತ್ತೇನೆ ಮತ್ತು ದೇವತೆಗಳಿಗೆ ಮೊದಲು ಇರುತ್ತೇನೆ.[೯] ನಾನು ಅಮೃತದ ಮಧ್ಯವು.[೧೦] ಯಾವನು ನನ್ನನ್ನು (ಅನ್ನಾರ್ಥಿಗಳಿಗೆ) ಕೊಡುತ್ತಾನೆಯೊ ಅವನು ಹೀಗೆ[೧೧] ನನ್ನನ್ನು ಕಾಪಾಡುತ್ತಾನೆ. ಅನ್ನರೂಪಿಯಾದ ನಾನು, (ಇತರರಿಗೆ) ಅನ್ನವನ್ನು (ಕೊಡದೆ) ತಿನ್ನುವವನನ್ನು ತಿನ್ನುತ್ತೇನೆ. ನಾನು ಸಮಸ್ತಭುವನವನ್ನು (ಈಶ್ವರರೂಪದಿಂದ) ಉಪಸಂಹರಿಸುತ್ತೇನೆ. ಸೂರ್ಯನಂತಿರುವ ಜ್ಯೋತಿಯು ನಾನು.' ಯಾವನು ಹೀಗೆ ಅರಿಯುತ್ತಾನೆಯೊ (ಅವನು ಪೂರ್ವೋಕ್ತವಾದ ಫಲವನ್ನು ಹೊಂದುತ್ತಾನೆ). ಹೀಗೆ ಉಪನಿಷತ್ತು.

[೧ ಪುರುಷನಲ್ಲಿಯೂ ಆದಿತ್ಯನಲ್ಲಿಯೂ ಇರುವ ಆತ್ಮನು ಒಬ್ಬನೇ ಎಂಬ ಜ್ಞಾನದಿಂದ.

೨ ಅನ್ನಮಯನಿಂದ ಆನಂದಮಯನ ವರೆಗೆ ಇರುವ ಅವಿದ್ಯಾಕಲ್ಪಿತರಾದ ಆತ್ಮರನ್ನು ದಾಟಿ ಅಥವಾ ಅರಿತುಕೊಂಡು, ಸತ್ಯಜ್ಞಾನಾನಂತವಾದ ಬ್ರಹ್ಮವೇ ತಾನಾಗಿ.

೩ ಭೂರಾದಿಲೋಕಗಳಲ್ಲಿ ಎಂದರೆ ಸರ್ವವೂ ತಾನೇ ಆಗಿ.

೪ ಸಮವಾಗಿರುವುದರಿಂದ ಬ್ರಹ್ಮವೇ ಸಾಮ.

೫ ಲೋಕಾನುಗ್ರಹಮಾಡುವುದಕ್ಕಾಗಿ ಪ್ರಕಟಿಸುತ್ತ, ಬ್ರಹ್ಮಜ್ಞಾನದ ಫಲವಾಗಿ ತಾನು ಕೃತಾರ್ಥನಾಗಿರುವೆನೆಂಬುದನ್ನು ಹಾಡುತ್ತ.

೬ ಆಶ್ಚರ್ಯಸೂಚಕ ಶಬ್ದಗಳು. ಅದ್ವೈತನಾದ ನಿರಂಜನನಾದ ಆತ್ಮನಾದರೂ ತಾನೇ ಅನ್ನವೂ ಅನ್ನಾದನೂ ಆಗಿರುವನೆಂಬ ಆಶ್ಚರ್ಯ.

೭ ಶ್ಲೋಕವೆಂದರೆ ಅನ್ನ ಮತ್ತು ಅನ್ನಾದಗಳ ಗುಂಪು. ಅದರ ಕರ್ತೃವಾದ ಚೇತನವಂತನು ತಾನೇ; ಪರಾರ್ಥವಾದ ಅನ್ನವನ್ನು ಇತರರಿಗಾಗಿ ಒಟ್ಟುಗೂಡಿಸುವವನು; ಎಂದರೆ ಆಯಾ ಅನ್ನಾದರಿಗೆ ತಕ್ಕಂತೆ ಅನ್ನವನ್ನು ಕೊಡುವವನು.

೮ ಮೂರ್ತಾಮೂರ್ತವಾದ ಜಗತ್ತಿಗೆ.

೯ ಹಿರಣ್ಯಗರ್ಭರೂಪದಿಂದ

೧೦ ಪ್ರಾಣಿಗಳಿಗೆ ಬೇಕಾದ ಅಮೃತತ್ವವು ತನ್ನ ಅಧೀನದಲ್ಲಿರುತ್ತದೆ ಎಂದರ್ಥ.

೧೧ ನಾಶವಾಗದೆ.]

# ತೈತ್ತಿರೀಯೋಪನಿಷತ್

## ತಾತ್ಪರ್ಯ ಟಿಪ್ಪಣಿಗಳು

(ಶ್ರೀರಂಗರಾಮಾನುಜಭಾಷ್ಯಾವಲಂಬಿ)

ಅನುವಾದಕರು:

ಎಸ್. ಎಸ್. ರಾಘವಾಚಾರ್, ಎಂ. ಎ.

ಅತಸೀಗುಚ್ಛಸಚ್ಛಾಯಮಂಚಿತೋರಸ್ಥಲಂ ಶ್ರಿಯಾ ।
ಅಂಜನಾಚಲಶೃಂಗಾರಮಂಜಲಿರ್ಮಮ ಗಾಹತಾಮ್ ॥

ವ್ಯಾಸಂ ಲಕ್ಷ್ಮಣಯೋಗೀಂದ್ರಂ ಪ್ರಣಮ್ಯಾನ್ಯಾನ್ ಗುರೂನಪಿ ।
ತೈತ್ತಿರೀಯಕವೇದಾಂತವಿವೃತಿಂ ಕರವಾಣ್ಯಹಮ್ ॥

# ತೈತ್ತಿರೀಯೋಪನಿಷತ್

## ಶೀಕ್ಷಾವಲ್ಲೀ

### ಮೊದಲನೆಯ ಅನುವಾಕ

ಸೂರ್ಯ, ವರುಣ, ಅರ್ಯಮನೆಂಬ ಆದಿತ್ಯ, ಇಂದ್ರ, ಬೃಹಸ್ಪತಿ, ಮಹಾವಿಕ್ರಮವೆಂಬ ಪದವಿನ್ಯಾಸವುಳ್ಳ ವಿಷ್ಣು, ಇವರು ಸುಖಪ್ರದರಾಗಲಿ.

ವೇದಕ್ಕೆ ನಮಸ್ಕಾರ. ವಾಯುವಿಗೆ ನಮಸ್ಕಾರ. ನೀನು ಪ್ರತ್ಯಕ್ಷ ಬ್ರಹ್ಮನಾಗಿರುವೆ. ನಿನ್ನನ್ನು ಪ್ರತ್ಯಕ್ಷಬ್ರಹ್ಮನೆಂದು ಹೇಳುವೆನು. ಋತವನ್ನು ಹೇಳುವೆನು. ಸತ್ಯವನ್ನು ಹೇಳುವೆನು. ಅಧ್ಯಯನಮಾಡಲ್ಪಡುವ ವೇದವು ಅಧ್ಯಯನಮಾಡುವ ನನ್ನನ್ನು ವಿಘ್ನಗಳಿಂದ ಕಾಪಾಡಲಿ; ನನಗೆ ಅಧ್ಯಯನ ಮಾಡಿಸುವ ಗುರುವನ್ನು ಕಾಪಾಡಲಿ. ನನ್ನನ್ನು ಮತ್ತು ನನ್ನ ಆಚಾರ್ಯ ನನ್ನು ಕಾಪಾಡಲಿ. ವಿಘ್ನಗಳು ಶಾಂತವಾಗಲಿ, ಶಾಂತವಾಗಲಿ, ಶಾಂತ ವಾಗಲಿ.

### ಎರಡನೆಯ ಅನುವಾಕ

ಶಿಕ್ಷೆಯನ್ನು ವರ್ಣಿಸುತ್ತೇವೆ. ಅಕಾರಾದಿವರ್ಣಗಳು, ಉದಾತ್ತಾದಿ ಸ್ವರಗಳು, ಹ್ರಸ್ವದೀರ್ಘಾದಿರೂಪವಾದ ಮಾತ್ರಗಳು, ಅಲ್ಪಪ್ರಾಣ-ಮಹಾ ಪ್ರಾಣಾದಿಲಕ್ಷಣವಾದ ಬಲ, ಸಪ್ತಸ್ವರಗಳು, ಮತ್ತು ವರ್ಣ, ಪದ ಇವುಗಳ ಸಂಹಿತಾದಿರೂಪವಾದ ಸಂತಾನ, ಹೀಗೆಂದು ಶಿಕ್ಷಾಧ್ಯಾಯವು ಹೇಳಲ್ಪಟ್ಟಿದೆ.

### ಮೂರನೆಯ ಅನುವಾಕ

ಬ್ರಹ್ಮವರ್ಚಸ್ಸು ಮತ್ತು ಯಶಸ್ಸು ನಮ್ಮಿಬ್ಬರಿಗೂ (ಗುರುಶಿಷ್ಯರಿಗೆ) ಒಟ್ಟಿಗೆ ಇರಲಿ. ಲೋಕ, ಜ್ಯೋತಿ, ವಿದ್ಯಾ, ಪ್ರಜಾ, ಶರೀರ, ಈ ಐದು ಅಧಿಕರಣಗಳಲ್ಲಿ ಸಂಹಿತಾ ಎನಿಸಿಕೊಳ್ಳುವ ಸಂಧಿಯ ರಹಸ್ಯವನ್ನು ವಿವರಿಸು ತ್ತೇವೆ. ಇವು ಮಹಾಸಂಹಿತೆಗಳೆನಿಸಿಕೊಳ್ಳುವುವು.

**ಲೋಕದಲ್ಲಿ**—ಪೃಥಿವಿಯು ಪೂರ್ವರೂಪ, ದ್ಯುಲೋಕವು ಉತ್ತರ ರೂಪ, ಆಕಾಶವು ಸಂಧಿ, ವಾಯುವು (ಉಭಯತ್ರ ಸಂಚರಿಸುವುದರಿಂದ) ಸಂಧಾನ, ಇದು ಲೋಕದ ವಿಷಯದಲ್ಲಿ. ಅನಂತರ—

**ಜ್ಯೋತಿಸ್ಸಿನಲ್ಲಿ**—ಅಗ್ನಿ ಪೂರ್ವರೂಪ, ಆದಿತ್ಯ ಉತ್ತರರೂಪ, ಅಪ್ಪು ಸಂಧಿ, ವಿದ್ಯುತ್ತು ಸಂಧಾನ. ಇದು ಜ್ಯೋತಿಸ್ಸಿನ ವಿಷಯ. ಅನಂತರ—

**ವಿದ್ಯೆಯಲ್ಲಿ**—ಆಚಾರ್ಯನು ಪೂರ್ವರೂಪ, ಶಿಷ್ಯನು ಉತ್ತರ ರೂಪ, ವಿದ್ಯೆಯು ಸಂಧಿ, ಪ್ರವಚನವು ಸಂಧಾನ. ಇದು ವಿದ್ಯೆಯ ವಿಷಯ ದಲ್ಲಿ. ಅನಂತರ—

**ಪ್ರಜೆಯಲ್ಲಿ**—ತಾಯಿ ಪೂರ್ವರೂಪ, ತಂದೆ ಉತ್ತರರೂಪ, ಪ್ರಜೆಯು ಸಂಧಿ, ಪ್ರಜೋತ್ಪತ್ತಿಯು ಸಂಧಾನ. ಇದು ಪ್ರಜಾವಿಷಯದಲ್ಲಿ. ಅನಂತರ—

**ಶರೀರದಲ್ಲಿ**—ಕೆಳಗಿನ ದವಡೆಯು ಪೂರ್ವರೂಪ, ಮೇಲಿನ ದವಡೆಯು ಉತ್ತರರೂಪ, ಮಾತು ಸಂಧಿ, ನಾಲಗೆಯು ಸಂಧಾನ. ಇದು ಶರೀರದ ವಿಷಯದಲ್ಲಿ. ಇವು ಮಹಾಸಂಹಿತೆಗಳು. ಯಾವನು ಈ ವ್ಯಾಖ್ಯಾತವಾದ ಮಹಾಸಂಹಿತೆಗಳನ್ನು ತಿಳಿಯುವನೊ, ಅವನನ್ನು ಪ್ರಜೆ, ಪಶುಗಳು, ಬ್ರಹ್ಮವರ್ಚಸ್ಸು, ಅನ್ನಾದಿಗಳು, ಮತ್ತು ಸ್ವರ್ಗಲೋಕ ಇವು ಸಂಧಿಸುವುವು.

## ನಾಲ್ಕನೆಯ ಅನುವಾಕ

ವೇದಗಳಲ್ಲಿ ಶ್ರೇಷ್ಠವೂ, ವಿಶ್ವರೂಪವೂ, ಆದ ಪ್ರಣವವು ಅಮೃತನಾದ ಪರಮಾತ್ಮನಿಂದ ಸರ್ವವೇದಗಳಿಗೂ ಅಧಿಕವಾಗಿ ಪ್ರಾದುರ್ಭೂತವಾಗಿದೆ. ಅದು ಪರಮೈಶ್ವರ್ಯಶಾಲಿ. ಅದು ಜ್ಞಾನದಿಂದ ನನ್ನನ್ನು ಉಜ್ಜೀವನ ಗೊಳಿಸಲಿ. ಎಲೈ ಪ್ರಕಾಶಮಾನವಾದ ಪ್ರಣವವೆ, ನನ್ನಲ್ಲಿ ಸದಾ ಅಮೃತ ಸ್ವರೂಪಿಯಾದ ಪರಮಾತ್ಮನ ಧಾರಣೆ ಉಂಟಾಗಲಿ.೧ ನನ್ನ ಶರೀರವು ಕಾಂತಿಯುಕ್ತವಾಗಲಿ. ನನ್ನ ಜಿಹ್ವೆಯು ಬ್ರಹ್ಮವದನಶೀಲವಾಗಿ ಭೋಗ್ಯ ತಮವಾಗಲಿ. ಕಿವಿಗಳಿಂದ ಹೆಚ್ಚುಹೆಚ್ಚಾಗಿ ಬ್ರಹ್ಮಪ್ರತಿಪಾದಕ ಶಾಸ್ತ್ರವನ್ನು ನಾನು ಕೇಳುವಂತಾಗಲಿ. ನೀನು ಬಹ್ಮನ ಕೋಶವಾಗಿರುವೆ. (ಜ್ಞಾನ

ಭರಿತವೂ, ಜ್ಞಾನಜನಕವೂ ಆಗಿರುವದರಿಂದ) ನೀನು ಜ್ಞಾನದಿಂದ ಮುಚ್ಚಲ್ಪಟ್ಟಿರುವೆ. ನಾನು ಕೇಳಿದ ತತ್ತ್ವಾರ್ಥವನ್ನು ಮರೆಯದಂತೆ ಕಾಪಾಡು.

(ಲಕ್ಷ್ಮೀಪ್ರಾರ್ಥನಾಮಂತ್ರ): ನೀನು ಸರ್ವವನ್ನು ಉತ್ಪತ್ತಿಮಾಡಿ, ವೃದ್ಧಿಗೊಳಿಸುವಳಾದುದರಿಂದ ನನಗೆ ಚೀರ ಮತ್ತು ಇತರ ವಸ್ತುಗಳು, ಹಸುಗಳು, ಅನ್ನಪಾನ, ಇವನ್ನು ಸರ್ವದಾ ಉಂಟುಮಾಡುವವಳಾಗಿ, ಹೆಚ್ಚಾಗಿ ವೇದಶ್ರೀಯನ್ನು, ಪಶ್ವಾದಿವಸ್ತುಗಳೊಡನೆ ನೀಡು. ಸ್ವಾಹಾ[2]. ಯೋಗ್ಯರಾದ ಬ್ರಹ್ಮಚಾರಿಗಳು ನನ್ನಲ್ಲಿ ಬರಲಿ; ಜನಮಧ್ಯೆ ನಾನು ಯಶಸ್ವಿಯಾಗಿರುವಂತೆ ಆಗಲಿ. ವಸುಯುಕ್ತರ ಮಧ್ಯೆ ನಾನು ಶ್ರೇಷ್ಠನಾಗಿರುವಂತೆ ಆಗಲಿ. ಎಲೈ ಈಶ್ವರನೆ, ಆ ನಿನ್ನನ್ನು ನಾನು ಹೊಂದುವೆನು. ಆ ನೀನು ನನ್ನನ್ನು ಸೇರು. ಹೇ ಸಹಸ್ರಶಾಖೆಯುಳ್ಳ ಈಶ್ವರನೆ, ನಿನ್ನನ್ನು ಪ್ರವೇಶಿಸಿ ನಾನು ಶುದ್ಧನಾಗುವೆನು. ಎಲೈ ಪರಮಾತ್ಮನೆ, ಹೇಗೆ ನೀರು ದಿಕ್ಕುದಿಕ್ಕುಗಳಲ್ಲಿ ಹರಿಯುತ್ತದೆಯೊ, ಹೇಗೆ ಮಾಸಗಳು ಸಂವತ್ಸರದಲ್ಲಿ ನುಗ್ಗಿ ಬರುತ್ತವೆಯೊ, ಹಾಗೆ ಯೋಗ್ಯವಾದ ಶಿಷ್ಯರು ನನ್ನಲ್ಲಿ ಬರಲಿ. ಎಲೈ ಧಾತನೆ, ನೀನು ಸನ್ನಿಹಿತನಾಗಿರುವೆ. ನನ್ನನ್ನು ವಿಶೇಷತಃ ಪಾಲಿಸು; ನನ್ನನ್ನು ಪ್ರಪನ್ನನನ್ನಾಗಿಮಾಡು.

[[1] ಬ್ರಹ್ಮವಿದ್ಯೆಗಾಗಿ ಪ್ರಣವವನ್ನು ಇಲ್ಲಿ ಪ್ರಾರ್ಥಿಸಿದೆ.
[2] ಮಂತ್ರವು ಹೋಮಸಾಧನವಾಗಿರುವುದರಿಂದ 'ಸ್ವಾಹಾ' ಎಂಬುದು ಅಂತದಲ್ಲಿದೆ.]

## ಐದನೆಯ ಅನುವಾಕ

ಭೂಃ, ಭುವಃ, ಸುವಃ ಎಂಬ ಇವು ಮೂರು ವ್ಯಾಹೃತಿಗಳು. ಇವುಗಳಲ್ಲದೆ 'ಮಹಃ' ಎಂಬ ನಾಲ್ಕನೆಯ ವ್ಯಾಹೃತಿಯನ್ನು ಮಾಹಾಚಮಸ್ಯನೆಂಬ ಋಷಿಯು ಹೇಳುತ್ತಾನೆ. ಮಹಃ ಎನ್ನುವುದು ಬ್ರಹ್ಮ. ಅವನೇ ಆತ್ಮನು. ಇತರ ದೇವತೆಗಳು ಅವನ ಅಂಗಗಳು. ಭೂಃ ಎಂದರೆ ಈ ಲೋಕ. ಭುವಃ ಎಂದರೆ ಅಂತರಿಕ್ಷ. ಸುವಃ ಎಂದರೆ ಸ್ವರ್ಗಲೋಕ. ಮಹಃ ಎಂದರೆ ಆದಿತ್ಯ. ಆದಿತ್ಯನಿಂದ ಸರ್ವಲೋಕಗಳು ಮಹತ್ವವನ್ನು ಹೊಂದುತ್ತವೆ. ಭೂಃ ಎಂದರೆ ಅಗ್ನಿ. ಭುವಃ ಎಂದರೆ ವಾಯು. ಸುವಃ ಎಂದರೆ ಆದಿತ್ಯ. ಮಹಃ ಎಂದರೆ ಚಂದ್ರಮ. ಚಂದ್ರಮನಿಂದ ಸರ್ವಜ್ಯೋತಿಗಳು ಮಹತ್ವವನ್ನು ಹೊಂದುವುವು. ಭೂಃ ಎಂದರೆ ಋಕ್ಕುಗಳು. ಭುವಃ ಎಂದರೆ ಸಾಮಗಳು.

ಸುವಃ ಎಂದರೆ ಯಜುಸ್ಸುಗಳು. ಮಹಃ ಎಂದರೆ ಬ್ರಹ್ಮ. ಬ್ರಹ್ಮನಿಂದ ಸರ್ವವೇದಗಳು ಮಹತ್ವವನ್ನು ಹೊಂದುವುವು. ಭೂಃ ಎಂದರೆ ಪ್ರಾಣ. ಭುವಃ ಎಂದರೆ ಅಪಾನ. ಸುವಃ ಎಂದರೆ ವ್ಯಾನ. ಮಹಃ ಎಂದರೆ ಅನ್ನ. ಅನ್ನದಿಂದ ಸರ್ವಪ್ರಾಣಗಳು ಮಹತ್ವವನ್ನು ಹೊಂದುವುವು. ಈ ನಾಲ್ಕು ವ್ಯಾಹೃತಿಗಳು ನಾಲ್ಕು ವಿಧವಾಗಿರುವುವು. ಈ ನಾಲ್ಕು ವಿಧವಾದ ನಾಲ್ಕು ವ್ಯಾಹೃತಿಗಳನ್ನು ಯಾವನು ತಿಳಿಯುವನೊ, ಅವನು ಬ್ರಹ್ಮನನ್ನು ತಿಳಿಯುವನು. ಅವನಿಗೆ ದೇವತೆಗಳೆಲ್ಲ ಪೂಜೆಯನ್ನು ಸಲ್ಲಿಸುವರು.

## ಆರನೆಯ ಅನುವಾಕ

ಹೃದಯಾಂತರ್ಗತವಾದ ಆಕಾಶದಲ್ಲಿ, ವಿಶುದ್ಧಮನೋಗ್ರಾಹ್ಯನೂ, ಅಮೃತನೂ, ಕಮನೀಯವಿಗ್ರಹನೂ, ಆಗಿ ಯಾವನಿರುವನೊ, ಅವನು ಉಪಾಸಿತವ್ಯನು. ಜಿಹ್ವೆಯ ಮಧ್ಯದಲ್ಲಿ ಗೋಸ್ತನದಂತೆ ಯಾವುದು ಲಂಬಿಸಿರುವುದೊ ಅದು ಸನ್ನಿಹಿತಮುಕ್ತೈಶ್ವರ್ಯನಾದ ಜೀವನ ನಿರ್ಗಮಮಾರ್ಗ. ಆ ಮಾರ್ಗದಲ್ಲಿ ಬ್ರಹ್ಮರುದ್ರರ ಕಾರಣಭೂತನಾದ ಭಗವಂತನು ವಿಶೇಶತಃ ಪ್ರಾಪ್ಯನಾಗಿ ನೆಲಸಿರುವನು.

ಪ್ರಯಾಣಕಾಲದಲ್ಲಿ ಶಿರಃಕಪಾಲವನ್ನು ಭೇದಿಸಿಕೊಂಡು ಭೂಃ ಎಂಬ ವ್ಯಾಹೃತಿಯ ಉಪಾಸನೆಯಿಂದ ಅಗ್ನಿಲೋಕದಲ್ಲಿ ಪ್ರತಿಷ್ಠಿತನಾಗುವನು; ಭುವಃ ಎಂಬ ವ್ಯಾಹೃತಿಯ ಉಪಾಸನೆಯಿಂದ ವಾಯುಲೋಕದಲ್ಲಿ ಪ್ರತಿಷ್ಠಿತನಾಗುವನು; ಸುವಃ ಎಂಬ ವ್ಯಾಹೃತಿಯ ಉಪಾಸನೆಯಿಂದ ಆದಿತ್ಯನಲ್ಲಿ ಪ್ರತಿಷ್ಠಿತನಾಗುವನು; ಮಹಃ ಎಂಬ ವ್ಯಾಹೃತಿಯ ಉಪಾಸನೆಯಿಂದ ಬ್ರಹ್ಮನಲ್ಲಿ ಪ್ರತಿಷ್ಠಿತನಾಗುನು. ಸ್ವಾರಾಜ್ಯವನ್ನು ಹೊಂದುವನು. ಮನಸ್ಸು, ವಾಕ್ಕು, ಚಕ್ಷುಸ್ಸು, ಶ್ರೋತ್ರ ಮತ್ತು ವಿಜ್ಞಾನ ಇವುಗಳ ಆಧಿಪತ್ಯವನ್ನು ಹೊಂದುವನು.[೧]

ಅನಂತರ ಹೀಗಾಗುವುದು. ಅವನಿಗೆ ಆಕಾಶಶರೀರನೂ, ಸತ್ಯಾತ್ಮರಾದ ಮುಕ್ತರಿಗೆ ಪ್ರಾಣದಂತೆ ಪ್ರೇಮಾಸ್ಪದಭೋಗ್ಯನೂ, ಸಂಕಲ್ಪಮಾತ್ರಸಿದ್ಧನಾದ ಆನಂದಸ್ವರೂಪನೂ, ಶಾಂತಿಸಮೃದ್ಧನೂ, ಅಮೃತನೂ ಆದ ಪರಬ್ರಹ್ಮನ ರೂಪವು ಆವಿರ್ಭವಿಸುವದು.

ಹೀಗೆ ಪ್ರಾಚೀನಯೋಗ್ಯನೆಂಬ ಶಿಷ್ಯನಿಗೆ ಉಪದೇಶವಾಯಿತು.

[೧ ಸರ್ವೇಂದ್ರಿಯಗಳೂ ಇವನ ಸಂಕಲ್ಪಾಧೀನಗಳಾಗುವುವು; ಅಥವಾ ಕರಣನಿರಪೇಕ್ಷವಾಗಿ ಇವನಿಗೆ ಜ್ಞಾನಪ್ರಾಪ್ತಿವಾಗುವುದು]

## ಏಳನೆಯ ಅನುವಾಕ

ಪೃಥಿವಿ, ಅಂತರಿಕ್ಷ, ದ್ಯುಲೋಕ, ದಿಕ್ಕುಗಳು, ಮತ್ತು ಅಂತರದಿಕ್ಕುಗಳು, ಇವು ಒಂದು ಪಂಚಕ. ಅಗ್ನಿ, ವಾಯು, ಆದಿತ್ಯ, ಚಂದ್ರಮ ಮತ್ತು ನಕ್ಷತ್ರಗಳು, ಇವು ಒಂದು ಪಂಚಕ. ಅಪ್ಪು, ಓಷಧಿಗಳು, ವನಸ್ಪತಿಗಳು, ಆಕಾಶ ಮತ್ತು ಆತ್ಮಾ ಇವು ಒಂದು ಪಂಚಕ. ಭೂತಗಳಿಗೆ ಸಂಬಂಧಪಟ್ಟ ಪಂಚಕಗಳು ಇಷ್ಟು.

ಇನ್ನು ಅಧ್ಯಾತ್ಮಪಂಚಕಗಳು. ಪ್ರಾಣ, ವ್ಯಾನ, ಅಪಾನ, ಉದಾನ ಮತ್ತು ಸಮಾನ ಇವು ಒಂದು ಪಂಚಕ. ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ತ್ವಕ್ಕು ಇವು ಒಂದು ಪಂಚಕ. ಚರ್ಮ, ಮಾಂಸ, ಸ್ನಾಯು, ಅಸ್ಥಿ, ಕೊಬ್ಬು, ಇವು ಒಂದು ಪಂಚಕ. ಇವುಗಳನ್ನು ಕುರಿತು ಋಷಿ ಹೇಳಿದನು. 'ಇದೆಲ್ಲ ಐದಾಗಿರುವುದು; ಐದರಿಂದಲೇ ಐದನ್ನು ಪಾಲಿಸುತ್ತಾನೆ.'

## ಎಂಟನೆಯ ಅನುವಾಕ

ಓಂ ಎನ್ನುವುದು ಬ್ರಹ್ಮ. ಈ ಸರ್ವವೂ ಓಂ. ವಿಧಿನಿಷೇಧಾತ್ಮಕ ಸರ್ವಧರ್ಮಗಳೂ ಓಂ ಎನ್ನುವುದರ ಅನುಕರಣ. ಓ ಎಂದು ಕೇಳುವದನ್ನು ಹೇಳುವರು. ಓಂ ಎಂದು ಸಾಮಗಳು ಗಾನಮಾಡುವುವು. ಓಂ ಎಂದು ಶಸ್ತ್ರಗಳು (ಗಾನವಿಲ್ಲದ ಋಕ್ಕುಗಳು) ಪ್ರಶಂಸಿಸುವುವು. ಓಂ ಎಂದು ಅಧ್ವರ್ಯುವು ಅನುಮೋದನೆಮಾಡುವನು. ಓಂ ಎಂದು ಬ್ರಹ್ಮನು ಅನುಜ್ಞೆ ಮಾಡುವನು. ಓಂ ಎಂದು ಅಗ್ನಿಹೋತ್ರಕ್ಕೆ ಅನುಜ್ಞೆಕೊಡುವನು. ವೇದವನ್ನು ಹೊಂದಬೇಕೆಂದು ಅಧ್ಯಯನಮಾಡುವವನು ಓಂ ಎನ್ನುವನು. ಹಾಗೆಯೇ ವೇದವನ್ನು ಹೊಂದುವನು.

## ಒಂಬತ್ತನೆಯ ಅನುವಾಕ

ಋತವು[1] ಮತ್ತು ವೇದಾಧ್ಯಯನ-ಅಧ್ಯಾಪನ. ಸತ್ಯ ಮತ್ತು ವೇದಾಧ್ಯಯನ-ಅಧ್ಯಾಪನ. ತಪಸ್ಸು ಮತ್ತು ವೇದಾಧ್ಯಯನ-ಅಧ್ಯಾಪನ. ದಮ ಮತ್ತು ವೇದಾಧ್ಯಯನ-ಅಧ್ಯಾಪನ. ಶಮ ಮತ್ತು ವೇದಾಧ್ಯಯನ-ಅಧ್ಯಾಪನ. ಅಗ್ನಿಗಳು ಮತ್ತು ವೇದಾಧ್ಯಯನ-ಅಧ್ಯಾಪನ. ಅಗ್ನಿಹೋತ್ರ ಮತ್ತು ವೇದಾಧ್ಯಯನ-ಅಧ್ಯಾಪನ. ಅತಿಥಿಗಳು ಮತ್ತು ವೇದಾಧ್ಯಯನ-ಅಧ್ಯಾಪನ. ಶ್ರಾದ್ಧ ಮತ್ತು ವೇದಾಧ್ಯಯನ-ಅಧ್ಯಾಪನ. ಪ್ರಜೆಗಳು ಮತ್ತು ವೇದಾಧ್ಯಯನ-ಅಧ್ಯಾಪನ. ಪ್ರಜನನ ಮತ್ತು ವೇದಾಧ್ಯಯನ-ಅಧ್ಯಾಪನ. ಪೌತ್ರೋತ್ಪತ್ತಿ ಮತ್ತು ವೇದಾಧ್ಯಯನ-ಅಧ್ಯಾಪನ.

ಸತ್ಯವಚನಶೀಲನಾದ ರಾಥೀತರ ಋಷಿಯು ಸತ್ಯವೊಂದೇ ಅನುಷ್ಠೇಯವೆಂದು ಹೇಳುವನು. ತಪೋನಿರತನಾದ ಪೌರುಶಿಷ್ಟಿ ಋಷಿಯು ತಪಸ್ಸೊಂದೇ ಅನುಷ್ಠೇಯವೆನ್ನುವನು. ನಾಕಮೌದ್ಗಲ್ಯ ಋಷಿಯು ವೇದಾಧ್ಯಯನ-ಅಧ್ಯಾಪನ ಇವೇ ಅನುಷ್ಠೇಯವೆನ್ನುವನು. ಅದೇ ತಪಸ್ಸು, ಅದೇ ತಪಸ್ಸು.

[[1] ಬ್ರಹ್ಮವಿದ್ಯೆಗೆ ಅಂಗವಾಗಿ ಅನುಷ್ಠಾನಮಾಡಬೇಕಾದದ್ದು.]

## ಹತ್ತನೆಯ ಅನುವಾಕ

ನಾನು ದೇಹಾಭಿಮಾನವನ್ನು ಛೇದಿಸಿರುವೆನು. ಗಿರಿಪೃಷ್ಠದಂತೆ ಕೀರ್ತಿವಂತನಾಗಿರುವೆನು. ಸರ್ವೋತ್ತರಪವಿತ್ರನಾಗಿ, ಸರ್ವಭೋಕ್ತೃವಾದ ಪರಮಾತ್ಮನಿಗೆ ಅಮೃತದಂತೆ ಭೋಗ್ಯನಾಗಿರುವೆನು. ಅವನಿಗೆ ಸಮೀಚೀನ ಭೋಗೋಪಕರಣಗಳಿವೆ. ನಾನು ಭಗವಂತನ ಜ್ಞಾನವುಳ್ಳವನೂ, ಅಮೃತನೂ, ಅಕ್ಷಯನೂ ಆಗಿರುವೆನು. ಇದು ತ್ರಿಶಂಕುವು ಕಂಡ ಮಂತ್ರ.

## ಹನ್ನೊಂದನೆಯ ಅನುವಾಕ

ವೇದವನ್ನು ಅಧ್ಯಾಪನಮಾಡಿದ ಮೇಲೆ ಆಚಾರ್ಯನು ಶಿಷ್ಯನಿಗೆ ಹೀಗೆ ಅನುಶಾಸನಮಾಡುವನು:— ಸತ್ಯವನ್ನು ಹೇಳು. ಧರ್ಮವನ್ನು ಆಚರಿಸು. ವೇದದ ಅಧ್ಯಯನದಲ್ಲಿ ಅಜಾಗರೂಕನಾಗಬೇಡ. ಗುರುವಿಗೆ ಪ್ರಿಯವಾಗುವ

ದಕ್ಷಿಣೆಯನ್ನು ಕೊಟ್ಟು ಪುತ್ರಸಂತತಿಯ ಅವಿಚ್ಛೇದಕ್ಕೋಸ್ಕರ ವಿವಾಹ ಮಾಡಿಕೊ. ಸತ್ಯದಿಂದ ಜಾರಕೂಡದು. ಧರ್ಮದಿಂದ ಜಾರಕೂಡದು. ಮಂಗಳಾಚರಣದಿಂದ ಜಾರಕೂಡದು. ಐಶ್ವರ್ಯಾರ್ಥಕರ್ಮದಿಂದ ಜಾರ ಕೂಡದು. ಸ್ವಾಧ್ಯಾಯ ಮತ್ತು ಪ್ರವಚನಗಳಿಂದ ಜಾರಕೂಡದು. ದೇವ ಪಿತೃಕಾರ್ಯಗಳಿಂದ ಜಾರಕೂಡದು. ದೇವರಂತೆ ಮಾತೆಯನ್ನು ಪರಿಗಣಿಸು. ದೇವರಂತೆ ತಂದೆಯನ್ನು ಪರಿಗಣಿಸು. ದೇವರಂತೆ ಆಚಾರ್ಯನನ್ನು ಪರಿ ಗಣಿಸು. ದೇವರಂತೆ ಅತಿಥಿಗಳನ್ನು ಪರಿಗಣಿಸು. ಶುದ್ಧವಾದ ಕರ್ಮಗಳು ನಿನ್ನಿಂದ ಸೇವಿಸಲ್ಪಡಲಿ. ಇತರ ಕರ್ಮಗಳು ತ್ಯಜಿಸಲ್ಪಡಲಿ. ನಾವು ಆಚರಿಸುವ ಕರ್ಮಗಳಲ್ಲಿ ಯಾವುವು ಸುಚರಿತಗಳೊ, ಅವು ನಿನ್ನಿಂದ ಸೇವಿ ಸಲ್ಪಡಲಿ. ನಮ್ಮ ಇತರ ಆಚರಣೆಗಳು ತ್ಯಜಿಸಲ್ಪಡಲಿ. ನಮಗಿಂತ ಶ್ರೇಷ್ಠ ರಾದ ಬ್ರಾಹ್ಮಣರೊಡನೆ ಒಂದೇ ಆಸನಾದಿಗಳಲ್ಲಿ ಸಮಾನನಂತೆ ನೀನು ಕುಳಿತುಕೊಳ್ಳಬೇಡ. ಶ್ರದ್ಧೆಯಿಂದ ದಾನಮಾಡಬೇಕು. ಅಶ್ರದ್ಧೆಯಿಂದ ದಾನಮಾಡಬಾರದು. ಪ್ರಸನ್ನತೆಯಿಂದ ದಾನಮಾಡಬೇಕು. ಲಜ್ಜೆಯಿಂದ ದಾನಮಾಡಬೇಕು. ಭೀತಿಯಿಂದ ದಾನಮಾಡಬೇಕು. ಸಮ್ಯಕ್ ಸಂಕಲ್ಪ ದಿಂದ ದಾನಮಾಡಬೇಕು. ನಿನಗೆ ಯಾವುದಾದರೂ ಕರ್ಮದಲ್ಲಿ, ಅಥವಾ ವೃತ್ತದಲ್ಲಿ ಧರ್ಮಾಧರ್ಮ ಸಂಶಯ ಒದಗಿದರೆ, ಆ ಸಂದರ್ಭದಲ್ಲಿ ವಿಚಾರ ಕುಶಲರೂ, ವೇದಶಾಸ್ತ್ರದಲ್ಲಿ ನಿಷ್ಠೆಯುಳ್ಳವರೂ, ಸಮಗ್ರವಾಗಿ ಅಂದರೆ ಲೌಕಿಕದಲ್ಲಿಯೂ ಕುಶಲರೂ, ಕ್ರೋಧಲೋಭಾದಿರಹಿತರೂ ಮತ್ತು ಧರ್ಮ ವನ್ನೇ ಇಚ್ಛಿಸುವವರೂ ಆದ ಬ್ರಾಹ್ಮಣರು, ಯಾವ ರೀತಿ ವರ್ತಿಸುವರೊ, ಆ ರೀತಿ ನೀನೂ ವರ್ತಿಸು. ಹಾಗೆಯೇ ನಿಂದಿತ ಕರ್ಮಗಳ ವಿಷಯದಲ್ಲಿ ಅವರು ಹೇಗೆ ವರ್ತಿಸುವರೊ, ಹಾಗೆಯೇ ನೀನೂ ವರ್ತಿಸು. ಇದು ಶಾಸನ. ಇದು ಉಪದೇಶ. ಇದು ವೇದದ ರಹಸ್ಯೋಪದೇಶ. ಈ ಅನು ಶಾಸನವು ಆಚಾರ್ಯನಿಂದ ಶಿಷ್ಯನಿಗೆ ಮಾಡಲ್ಪಡಬೇಕು. ಹೀಗೆ ಉಪಾಸನೆ ಮಾಡಬೇಕು. ಹೀಗೆಯೇ ಉಪಾಸನೆ ಮಾಡಬೇಕು.

## ಹನ್ನೆರಡನೆಯ ಅನುವಾಕ

ಸೂರ್ಯ, ವರುಣ, ಅರ್ಯಮ, ಇಂದ್ರ, ಬೃಹಸ್ಪತಿ, ಉರುಕ್ರಮ ನಾದ ವಿಷ್ಣು, ಇವರು ನಮಗೆ ಸುಖಪ್ರದರಾಗಲಿ. ವೇದಕ್ಕೆ ನಮಸ್ಕಾರ.

ವಾಯುವಿಗೆ ನಮಸ್ಕಾರ. ನೀನು ಪ್ರತ್ಯಕ್ಷಬ್ರಹ್ಮನಾಗಿರುವೆ. ನಿನ್ನನ್ನು ಪ್ರತ್ಯಕ್ಷ ಬ್ರಹ್ಮನೆಂದು ಹೇಳಿದೆನು. ಋತವನ್ನು ಹೇಳಿದೆನು. ಸತ್ಯವನ್ನು ಹೇಳಿದೆನು. ಅದು (ವೇದವು) ನನ್ನನ್ನು ಕಾಪಾಡಿತು; ಆಚಾರ್ಯನನ್ನು ಕಾಪಾಡಿತು. ನನ್ನನ್ನು ಕಾಪಾಡಿತು; ಆಚಾರ್ಯನನ್ನು ಕಾಪಾಡಿತು.

ಓಂ ಶಾಂತಿಃ ಶಾಂತಿಃ ಶಾಂತಿಃ

# ಆನಂದವಲ್ಲೀ

## ಮೊದಲನೆಯ ಅನುವಾಕ

### ಹರಿಃ ಓಂ

(ಅಧೀತಮಂತ್ರವು) ನಮ್ಮಿಬ್ಬರನ್ನೂ (ಗುರುಶಿಷ್ಯರನ್ನು) ಒಟ್ಟಿಗೆ ರಕ್ಷಿಸಲಿ; ನಮ್ಮಿಬ್ಬರನ್ನೂ ಒಟ್ಟಿಗೆ ಪಾಲಿಸಲಿ; ನಾವಿಬ್ಬರೂ ಒಟ್ಟಿಗೆ ವೀರ್ಯವನ್ನು ಪಡೆಯುವೆವು; ನಮ್ಮಿಬ್ಬರ ವಿದ್ಯೆಯು ತೇಜಸ್ವಿಯಾಗಲಿ; ನಾವಿಬ್ಬರೂ ಪರಸ್ಪರ ದ್ವೇಷವಿಲ್ಲದೆ ಅನುರಕ್ತರಾಗಿರುವ. ಸರ್ವದೋಷಗಳೂ ಶಾಂತವಾಗಲಿ, ಶಾಂತವಾಗಲಿ, ಶಾಂತವಾಗಲಿ.

ಬ್ರಹ್ಮವನ್ನು ಉಪಾಸನೆಮಾಡುವವನು ಸರ್ವೋತ್ಕೃಷ್ಟವಾದುದನ್ನು ಹೊಂದುವನು.[೧] ಈ ವಿಷಯದಲ್ಲಿ ಅಧ್ಯೇತೃಗಳು ಈ ಋಕ್ಕನ್ನು ಹೇಳಿರುವರು—ಬ್ರಹ್ಮನು ಸತ್ಯ, ಜ್ಞಾನ ಮತ್ತು ಅನಂತ.[೨] ಯಾವನು ಹೃದಯಗುಹಾಂತರ್ವರ್ತಿಯಾದ ಬ್ರಹ್ಮನನ್ನು ಉಪಾಸನೆ ಮಾಡುವನೊ, ಅವನು ಪರಮಪದದಲ್ಲಿ ಸರ್ವಜ್ಞನಾದ ಬ್ರಹ್ಮನೊಡನೆ ಅವನ ಕಲ್ಯಾಣಗುಣಗಳನ್ನು ಭೋಗ್ಯತ್ವೇನ ಹೊಂದುವನು.

ಅಂತಹ ಈ ಆತ್ಮನಿಂದ ಆಕಾಶವು ಹುಟ್ಟಿತು; ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥಿವೀ, ಪೃಥಿವಿಯಿಂದ ಓಷಧಿಗಳು, ಓಷಧಿಗಳಿಂದ ಅನ್ನ, ಅನ್ನದಿಂದ ಪುರುಷ(ಶರೀರ), ಇವು ಹುಟ್ಟಿದುವು.

[[೧] ಇದು ಸೂತ್ರಭೂತವಾದ ವಾಕ್ಯ. ಇದರಲ್ಲಿ 'ಬ್ರಹ್ಮ'ಶಬ್ದದಿಂದ ಪರತತ್ತ್ವವನ್ನೂ, 'ವಿತ್'ಶಬ್ದದಿಂದ ಪರಮಸಾಧನವಾದ ಉಪಾಸನಾತ್ಮಕಜ್ಞಾನವನ್ನೂ, 'ಆಪ್ನೋತಿ'ಶಬ್ದದಿಂದ ಪರಮಪ್ರಾಪ್ತಿಯನ್ನೂ, 'ಪರಂ'ಶಬ್ದದಿಂದ ಪರಮಪ್ರಾಪ್ಯವನ್ನೂ ಹೇಳಿದೆ. ಮುಂದೆ ಬರುವುದೆಲ್ಲ ಈ ಪ್ರಮೇಯ-ಚತುಷ್ಟಯದ ವಿವರಣೆಯಾಗಿದೆ.

[೨] ಈ ಋಕ್ಕು ಈ ನಾಲ್ಕು ಅಂಶಗಳನ್ನು ವಿವರಿಸುತ್ತದೆ. ಬ್ರಹ್ಮನು ಸತ್ಯ, ಜ್ಞಾನ ಮತ್ತು ಅನಂತ ಎಂದು ಬ್ರಹ್ಮನ ಲಕ್ಷಣವು ಹೇಳಲ್ಪಟ್ಟಿದೆ. ಹೃದಯಗುಹಾಂತರ್ವರ್ತಿಯಾದ ಬ್ರಹ್ಮನ ಉಪಾಸನೆಯನ್ನು ಹೇಳುವುದರಿಂದ ಧ್ಯಾನದ ಪ್ರಕಾರವು ಹೇಳಲ್ಪಟ್ಟಿದೆ. ಸರ್ವಜ್ಞನಾದ ಬ್ರಹ್ಮ ಮತ್ತು ಅವನ ಕಲ್ಯಾಣಗುಣಗಳು ಪ್ರಾಪ್ಯವೆಂದು ನಿರ್ದಿಷ್ಟವಾಗಿವೆ. ಪರಮಪದದಲ್ಲಿ ಇವುಗಳನ್ನು ಉಪಾಸಕನು ಭೋಗ್ಯತ್ವೇನ ಹೊಂದುವನು ಎನ್ನುವುದರಿಂದ ಪ್ರಾಪ್ತಿಯ ಪ್ರಕಾರವನ್ನೂ ಹೇಳಿದೆ.

ಬ್ರಹ್ಮನೆಂದರೆ ಸ್ವರೂಪತಃ, ಗುಣತಃ, ವಿಭೂತಿತಃ ಬೃಹತ್ವಶಾಲಿಯಾದ ಪರತತ್ತ್ವ ಇವನು ಸತ್ಯ; ಅರ್ಥಾತ್ ನಿರ್ವಿಕಾರಿ, ನಿರುಪಾಧಿಕಸತ್ತೆಯುಳ್ಳವನು. ಆದು ದರಿಂದಲೇ ಇವನು ಅಚೇತನದಿಂದಲೂ, ಅಚೇತನಸಂಸೃಷ್ಟವಾದ ಬದ್ಧಜೀವ ನಿಂದಲೂ ಬೇರೆಯಾಗಿರುವನು. ಇವನು ಜ್ಞಾನ; ಅರ್ಥಾತ್ ಇವನು ನಿತ್ಯ ಮತ್ತು ಅಸಂಕುಚಿತಜ್ಞಾನವೊಂದನ್ನೇ ತನ್ನ ರೂಪವಾಗಿ ಹೊಂದಿರುವನು. ಆದುದರಿಂದಲೇ, ಒಂದು ಕಾಲದಲ್ಲಿ ಜ್ಞಾನಸಂಕೋಚವನ್ನು ಹೊಂದಿದ್ದ ಮುಕ್ತಜೀವರಿಗಿಂತ ಇವನು ಬೇರೆಯಾಗಿರುವರು. ಬ್ರಹ್ಮನು ಅನಂತ; ಅರ್ಥಾತ್, ಸರ್ವದೇಶವ್ಯಾಪಿ, ಸರ್ವ ಕಾಲಸ್ಥಿತ ಮತ್ತು ಸರ್ವವಸ್ತುಗಳಲ್ಲಿಯೂ ಅಂತರ್ಯಾಮಿ. ಇವನ ಗುಣಗಳು ನಿರತಿಶಯಪ್ರಕರ್ಷವನ್ನು ಹೊಂದಿರುವುವು ಎಂದು ಅನಂತಶಬ್ದಕ್ಕೆ ಅರ್ಥ. ಅನಂತಗುಣವಿಶಿಷ್ಟನಾಗಿರುವನು ಬ್ರಹ್ಮ. ಅನಂತತ್ವದ ದೆಸೆಯಿಂದ ನಿತ್ಯರಿಗಿಂತಲೂ ಬ್ರಹ್ಮನು ವಿಲಕ್ಷಣನೆಂದು ಸಿದ್ಧಿಸುವುದು. ಇದು ಬ್ರಹ್ಮನ ಲಕ್ಷಣ.

'ವೇದ' ಎಂದು ಸಾಮಾನ್ಯವಾಗಿ ಹೇಳಿದ್ದರೂ, ಭಕ್ತಿರೂಪಾಪನ್ನವೂ ಉಪಾಸ ನಾತ್ಮಕವೂ ಆದ ವಿಶೇಷಜ್ಞಾನವೇ ಇಲ್ಲಿ ಅಭಿಪ್ರೇತ. ಧ್ಯಾನಕ್ಕೆ ವಿಷಯವಾದದ್ದು ಸ್ವಾಂತರ್ಯಾಮಿಯಾದ ಬ್ರಹ್ಮವಸ್ತು. ಪ್ರಾಪ್ಯವಾದುದು ಕಲ್ಯಾಣಗುಣವಿಶಿಷ್ಟನಾದ ಪರಮಾತ್ಮ. 'ಬ್ರಹ್ಮಣಾ ಸಹ' ಎಂದರೆ ಬ್ರಹ್ಮನೂ ಭೋಗ್ಯ, ಅವನ ಕಲ್ಯಾಣಗುಣ ಗಳೂ ಭೋಗ್ಯವೆಂದರ್ಥ. 'ಪರಮೇ ವ್ಯೋಮನ್' ಎಂಬ ಶಬ್ದವು ಮುಕ್ತಿಸ್ಥಾನವಾದ ನಿತ್ಯವಿಭೂತಿಯೆಂದೂ, 'ಅಶ್ನುತೇ' ಎಂಬ ಪ್ರಾಪ್ತಿವಾಚಕಪದವು ಭೋಗ್ಯತ್ವೇನ ಪ್ರಾಪ್ತಿಯೆನ್ನುವುದನ್ನೂ ಹೇಳುವುವು. ಬ್ರಹ್ಮನು ಭೋಗ್ಯ, ಮುಕ್ತನು ಭೋಕ್ತೃ ಎಂದೂ ಹೇಳಿದಂತಾಯಿತು.]

ಈ ಪುರುಷನೆಂದು ಹೇಳಲ್ಪಟ್ಟ ದೇಹವು ಅನ್ನರಸದ ಪರಿಣಾಮ. ಈ ದೇಹಕ್ಕೆ ಇದೇ ಶಿರಸ್ಸು; ಇದು ದಕ್ಷಿಣಪಕ್ಷ; ಇದು ಉತ್ತರಪಕ್ಷ; ಮಧ್ಯ ದೇಹಭಾಗವು ಆತ್ಮ; ನಾಭಿಯ ಅಧರಭಾಗದ ಚರಣದ್ವಯವು ಪುಚ್ಛ; ಇದೇ ಆಧಾರ[೧]. ಈ ವಿಷಯದಲ್ಲಿ ಈ ಶ್ಲೋಕವಿದೆ.

[[೧] ಇಲ್ಲಿ ಪುರುಷಶರೀರವನ್ನು ಪಕ್ಷಿಯಂತೆ ಚಿತ್ರಿಸಿದೆ.]

## ಎರಡನೆಯ ಅನುವಾಕ

ಪೃಥಿವಿಯನ್ನು ಆಶ್ರಯಿಸಿರುವ ಸರ್ವಪ್ರಾಣಿಗಳು ಅನ್ನದಿಂದ ಉತ್ಪನ್ನ ವಾಗುವುವು. ಅನಂತರ ಅನ್ನದಿಂದಲೇ ಜೀವಿಸುವುವು. ಅನಂತರ ಅನ್ನದಲ್ಲಿ ಲಯಹೊಂದುವುವು. ಸರ್ವಭೂತಗಳಿಗೆ ಉಪಕಾರಕವಾದ ಅನ್ನವು ಜ್ಯೇಷ್ಠವು. ಅದು ಸರ್ವೌಷಧವೆನಿಸಿಕೊಳ್ಳುವುದು. ಅನ್ನವನ್ನು ಬ್ರಹ್ಮ

ದೃಷ್ಟಿಯಿಂದ ಉಪಾಸನೆಮಾಡುವವರು ಎಷ್ಟು ಅಪೇಕ್ಷಿತವೋ ಅಷ್ಟು ಅನ್ನವನ್ನು ಹೊಂದುವರು. ಅನ್ನದಲ್ಲಿ ಬ್ರಹ್ಮಸಾಮ್ಯವಿದೆ; ಬ್ರಹ್ಮದಂತೆ ಅದೂ ಸರ್ವಭೂತ ಜ್ಯೇಷ್ಠ ಮತ್ತು ಸರ್ವೌಷಧ. ಹಾಗೆಯೇ ಅನ್ನದಿಂದ ಭೂತಗಳು ಹುಟ್ಟುತ್ತವೆ ಮತ್ತು ವೃದ್ಧಿಹೊಂದುತ್ತವೆ. ಭೂತಗಳಿಂದ ತಿನ್ನಲ್ಪಡುತ್ತದೆ ಮತ್ತು ಕೊನೆಯಲ್ಲಿ ಅವುಗಳನ್ನು ತಿನ್ನುತ್ತದೆ, ಆದುದರಿಂದ ಅನ್ನಕ್ಕೆ 'ಅನ್ನ'ವೆಂದು ಹೆಸರು. ಈ ಅನ್ನರಸಮಯಪುರುಷನಿಗಿಂತ ಅನ್ಯನೂ, ಅವನಲ್ಲಿ ಅಂತರ್ಗತನೂ ಆದ ಆತ್ಮನು ಪ್ರಾಣಮಯನು. ಪ್ರಾಣಮಯನಿಂದ ಈ ಅನ್ನರಸಮಯನು ವ್ಯಾಪ್ತನಾಗಿರುವನು. ಪ್ರಾಣಮಯನೂ ಪುರುಷಾಕೃತಿಯನ್ನು ಹೊಂದಿರುವನು. ಅನ್ನಮಯನು ಪುರುಷಾಕೃತಿಯಲ್ಲಿರುವುದರಿಂದ, ಅವನನ್ನು ಅನುಕರಿಸಿ, ಇವನೂ ಪುರುಷಾಕಾರನೆಂದು ತಿಳಿಯಬೇಕು. ಅವನ ಶಿರಸ್ಸು ಪ್ರಾಣ; ವ್ಯಾನವು ದಕ್ಷಿಣಪಕ್ಷ; ಅಪಾನವು ಉತ್ತರಪಕ್ಷ; ಧಾರಕವಾದ ಆಕಾಶವು ಅವನ ಮಧ್ಯಭಾಗ; (ಆಕಾಶಕ್ಕೆ ಪೃಥಿವಿಯು ಆಧಾರವಾದುದರಿಂದ) ಪೃಥಿವಿಯೇ ಅವನ ಪುಚ್ಛ. ಈ ವಿಷಯದಲ್ಲಿ ಈ ಶ್ಲೋಕವಿದೆ.

## ಮೂರನೆಯ ಅನುವಾಕ

ಪ್ರಾಣಕ್ಕೆ ಅಧೀನವಾಗಿ ದೇವತೆಗಳು ಬದುಕುವರು; ಹಾಗೆಯೇ ಮನುಷ್ಯರು ಮತ್ತು ಪಶುಗಳು ಪ್ರಾಣಾಧೀನವಾಗಿ ಜೀವಂತರಾಗಿರುವರು. ಪ್ರಾಣವು ಭೂತಗಳ ಆಯುಸ್ಸು. ಆದುದರಿಂದ ಅದು ಸರ್ವಾಯುಷವೆನಿಸಿಕೊಂಡಿದೆ. ಈ ಲಕ್ಷಣದ ಪ್ರಾಣವನ್ನು ಬ್ರಹ್ಮದೃಷ್ಟಿಯಿಂದ ಯಾರು ಉಪಾಸಿಸುವರೊ, ಅವರು ಸರ್ವ ಆಯುಸ್ಸನ್ನು ಹೊಂದುವರು. ಪ್ರಾಣವು ಭೂತಗಳ ಆಯುಸ್ಸು. ಆದುದರಿಂದ ಅದು ಸರ್ವಾಯುಷವೆನಿಸಿಕೊಳ್ಳುವುದು. ಪೂರ್ವದಲ್ಲಿ ಹೇಳಿದ ಅನ್ನಮಯನಿಗೆ ಯಾವ ಶಾರೀರನು ಆತ್ಮನೊ, ಅವನೇ ಈ ಪ್ರಾಣಮಯನಿಗೂ ಆತ್ಮನಾಗಿರುವನು. ಈ ಪ್ರಾಣಮಯನಿಗಿಂತ ಅನ್ಯನೂ, ಇವನಲ್ಲಿ ಅಂತರ್ಗತನೂ ಆದ ಆತ್ಮನು ಮನೋಮಯನು. ಮನೋಮಯನಿಂದ ಪ್ರಾಣಮಯನು ವ್ಯಾಪ್ತನಾಗಿರುವನು. ಮನೋಮಯನೂ ಪುರುಷಾಕೃತಿ ಎಂದು ಅರಿಯಬೇಕು. ಪ್ರಾಣಮಯನ ಪುರುಷಾಕೃತಿಯನ್ನು ಅನುಕರಿಸಿ ಇವನೂ

ಪುರುಷಾಕಾರನಾಗಿರುವನು. ಮನೋಮಯನಿಗೆ ಯಜುಸ್ಸೇ ಶಿರಸ್ಸು; ಋಕ್ಕು ದಕ್ಷಿಣಪಕ್ಷ; ಸಾಮವು ಉತ್ತರಪಕ್ಷ; ವಿಧಿನಿಷೇಧರೂಪವಾದ ಆದೇಶವೇ ಆತ್ಮ; ಅಥರ್ವಾಂಗಿರಸವೇ ಆಧಾರಭೂತವಾದ ಪುಚ್ಛ. ಈ ವಿಷಯದಲ್ಲಿ ಈ ಶ್ಲೋಕವಿದೆ.

## ನಾಲ್ಕನೆಯ ಅನುವಾಕ

ಯಾವ ಬ್ರಹ್ಮಾನಂದದ ಇಯತ್ತೆಯನ್ನು ಹೊಂದಲಾರದೆ ವಾಕ್ಕು ಮನಸ್ಸಿನೊಡನೆ ಹಿಂದಿರುಗುವುದೊ, ಆ ಬ್ರಹ್ಮಾನಂದವನ್ನು ವಿಶುದ್ಧ ಮನಸ್ಸಿನಿಂದ ತಿಳಿಯುವವನು ಯಾವಾಗಲೂ ಹೆದರುವುದಿಲ್ಲ.

ಪೂರ್ವದಲ್ಲಿ ಹೇಳಿದ ಪ್ರಾಣಮಯನಿಗೆ ಯಾವ ಶಾರೀರನು ಆತ್ಮನೊ, ಅವನೇ ಈ ಮನೋಮಯನಿಗೂ ಆತ್ಮನಾಗಿರುವನು. ಈ ಮನೋಮಯನಿಗಿಂತ ಅನ್ಯನೂ, ಅವನಲ್ಲಿ ಅಂತರ್ಗತನೂ, ಆದವನು ವಿಜ್ಞಾನಮಯನು.[೧] ವಿಜ್ಞಾನಮಯನಿಂದ ಈ ಮನೋಮಯನು ವ್ಯಾಪ್ತನಾಗಿರುವನು. ಅವನೂ ಕೂಡ ಪುರುಷಾಕೃತಿಯೆಂದು ಅರಿಯಬೇಕು. ಮನೋಮಯನ ಪುರುಷಾಕಾರವನ್ನು ಅನುಕರಿಸಿ ಇವನೂ ಪುರುಷಾಕಾರನಾಗಿರುವನು. ವಿಜ್ಞಾನಮಯನಿಗೆ ಶ್ರದ್ಧೆಯೇ ಶಿರಸ್ಸು; ಋತವೇ ದಕ್ಷಿಣಪಕ್ಷ; ಸತ್ಯವೇ ಉತ್ತರಪಕ್ಷ; ಯೋಗವೇ[೨] ಮಧ್ಯಭಾಗ; ಮಹಸ್ಸೇ[೩] ಆಧಾರಭೂತವಾದ ಪುಚ್ಛ. ಈ ವಿಷಯದಲ್ಲಿ ಈ ಶ್ಲೋಕವಿದೆ.

[[೧] ವಿಜ್ಞಾನಮಯನೆಂದರೆ ಜೀವಾತ್ಮ; ಕೇವಲ ಬುದ್ಧಿಯಲ್ಲ.
[೨] ಇಲ್ಲಿ ಯೋಗವೆಂದರೆ 'ಬ್ರಹ್ಮಣೇ ತ್ವಾ ಮಹಸೇ ಓಮಿತ್ಯಾತ್ಮಾನಂ ಯುಂಜೀತ' ಎಂದು ಉಪದಿಷ್ಟವಾಗಿರುವ ಜೀವಾತ್ಮನ ಸಮರ್ಪಣಯೋಗ.
[೩] ಮಹಸ್ಸೆಂದರೆ, ಯೋಗವಿರೋಧಿ-ನಿರಸನಸಾಮರ್ಥ್ಯ.]

## ಐದನೆಯ ಅನುವಾಕ

ವಿಜ್ಞಾನವು ಯಜ್ಞವನ್ನು ಮಾಡುವುದು, ಹಾಗೆಯೇ ಕರ್ಮಗಳನ್ನು ಮಾಡುವುದು. ಸರ್ವದೇವತೆಗಳು ವಿಜ್ಞಾನವನ್ನು ಪ್ರಕೃತಿಗಿಂತ ಶ್ರೇಷ್ಠವೆಂದು ಉಪಾಸನೆಮಾಡುವರು. ಯಾವನು ಈ ಜೀವರೂಪನಾದ ಬ್ರಹ್ಮವನ್ನು ತಿಳಿಯುವನೊ, ಅವನು ಆ ಜ್ಞಾನದಿಂದ ಯಾವಾಗಲೂ ಜಾರದಿದ್ದರೆ

ಆದರೆ, ಶರೀರದಲ್ಲಿರುವಾಗಲೇ ಸರ್ವಪಾಪಗಳಿಂದ ಮುಕ್ತನಾಗಿ ಸರ್ವಕಾಮುಗಳನ್ನು ಹೊಂದುವನು. ಪೂರ್ವದಲ್ಲಿ ಹೇಳಿದ ಮನೋಮಯನಿಗೆ ಯಾವ ಶಾರೀರನು ಆತ್ಮನೊ, ಅವನೇ ಈ ವಿಜ್ಞಾನಮಯನಿಗೂ ಆತ್ಮನಾಗಿರುವನು. ಈ ವಿಜ್ಞಾನಮಯನಿಗಿಂತ ಅನ್ಯನೂ, ಅವನಲ್ಲಿ ಅಂತರ್ಗತನೂ ಆದ ಆತ್ಮನು ಆನಂದಮಯನು. ಆನಂದಮಯನಿಂದ ವಿಜ್ಞಾನಮಯನು ವ್ಯಾಪ್ತನಾಗಿರುವನು. ಅವನೂ ಪುರುಷಾಕೃತಿಯಲ್ಲಿರುವನೆಂದು ಅರಿಯಬೇಕು. ವಿಜ್ಞಾನಮಯನ ಪುರುಷಾಕೃತಿಯನ್ನು ಅನುಕರಿಸಿ ಇವನೂ ಪುರುಷಾಕಾರನಾಗಿರುವನು. ಅವನಿಗೆ ಪ್ರಿಯವೇ ಶಿರಸ್ಸು; ಮೋದವೇ ದಕ್ಷಿಣಪಕ್ಷ; ಪ್ರಮೋದವೇ ಉತ್ತರಪಕ್ಷ; ಆನಂದವೇ ಮಧ್ಯಭಾಗ; ಬ್ರಹ್ಮನೇ ಆಧಾರಭೂತವಾದ ಪುಚ್ಛ. ಈ ವಿಷಯದಲ್ಲಿ ಈ ಶ್ಲೋಕವಿದೆ.

[ಆನಂದಮಯನೆಂದರೆ ಪರಬ್ರಹ್ಮನು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಇವರಂತೆ ಇವನು ಅವರ ಆತ್ಮನಲ್ಲ. ಮಯನೆಂದರೆ ಪರಿಣಾಮವೆಂದಲ್ಲ, 'ಪ್ರಭೂತಾನಂದ' ಎಂದು ಅರ್ಥ. 'ಕಂ ಬ್ರಹ್ಮ ಖಂ ಬ್ರಹ್ಮ' 'ಭೂಮೈವಸುಖಂ' ಎನ್ನುವ ರೀತಿಯಲ್ಲಿ ಅನಂತಾನಂದಕ್ಕೆ ಆನಂದಮಯನೆಂದು ನಿರ್ದೇಶ. 'ಬ್ರಹ್ಮಪುಚ್ಛಂ' ಎನ್ನುವುದರಿಂದ ಬ್ರಹ್ಮನು ಆನಂದಮಯನ ಅವಯವವೆಂದು ಅರ್ಥಮಾಡಬಾರದು. ಬೃಹತ್ವವಿಶಿಷ್ಟಪರವಸ್ತುವೆ, ಆ ಬೃಹತ್ವದ ದೆಸೆಯಿಂದ ಆನಂದಮಯುವಾಗಿರುವುದು ಎಂದು ಭಾವ. 'ಆನಂದಮಯ' ಪುರುಷನು ಪರಬ್ರಹ್ಮನೆನ್ನುವುದು ಶ್ರೀಭಾಷ್ಯದ ಆನಂದಮಯಾಧಿಕರಣದಲ್ಲಿ ವಿಪುಲವಿಚಾರ ಪೂರ್ವಕವಾಗಿ ನಿರ್ಣಯಿಸಲ್ಪಟ್ಟಿದೆ.]

## ಆರನೆಯ ಅನುವಾಕ

ಯಾವನಾದರೂ ಈ ಆನಂದಮಯ ಬ್ರಹ್ಮನನ್ನು ಅಸತ್ ಎಂದು ತಿಳಿದಿದ್ದೇ ಆದರೆ, ಅವನು ಅಸತ್ತೇ ಆಗುವನು. ಬ್ರಹ್ಮವು ಇದೆ ಎಂದು ತಿಳಿದಿದ್ದೇ ಆದರೆ, ಅವನು (ಎಂದರೆ ಹಾಗೆ ತಿಳಿಯುವವನು) ಇರುವನು ಎಂದು (ಜ್ಞಾನಿಗಳು) ತಿಳಿಯುವರು. ಪೂರ್ವದಲ್ಲಿ ಹೇಳಿದ ವಿಜ್ಞಾನಮಯಕ್ಕೆ ಯಾವ ಶಾರೀರನು ಆತ್ಮನೊ, ಅವನೇ ಈ ಆನಂದಮಯನಿಗೂ ಆತ್ಮನಾಗಿರುವನು.[೧]

[[೧] ಇಲ್ಲಿ ಆನಂದಮಯನಿಗಿಂತ ಅನ್ಯನೂ, ಅವನಲ್ಲಿ ಅಂತರ್ಗತನೂ, ಆದ ಬೇರೊಂದು ಆತ್ಮನ ಪ್ರತಿಪಾದನೆ ಇಲ್ಲದಿರುವುದರಿಂದ, ಅವನಿಗೆ ಅವನೇ ಆತ್ಮನು ಎಂದು ಹೇಳಿದಂತಾಯಿತು. ಅಂದರೆ ಆನಂದಮಯನು ಅನನ್ಯಾತ್ಮನು ಎಂದು ಭಾವ.]

'ಹೀಗೆ ತಿಳಿಯುವವನು ಈ ಲೋಕವನ್ನು ಬಿಟ್ಟ ಮೇಲೆ ಬೇರೆ ಯಾ ಲೋಕವನ್ನಾದರೂ ಹೊಂದುವನೇ? ಅಲ್ಲಿ ಭೋಗ್ಯತ್ವೇನ ಏನನ್ನಾದರೂ ಹೊಂದುವನೇ?' ಎಂದು ಅನಂತರ ಪ್ರಶ್ನೆಗಳು ಹುಟ್ಟುತ್ತವೆ.

ಆ ಆನಂದಮಯನಾದ ಆತ್ಮನು 'ನಾನು ಬಹುವಾಗುವೆನು; ಅದಕ್ಕೋ ಸ್ಕರ ಸೃಷ್ಟಿಸುವೆನು' ಎಂದು ಸಂಕಲ್ಪಿಸಿದನು. ಅವನು ಸೃಷ್ಟ್ಯಾಲೋಚನಾ ರೂಪವಾದ ತಪಸ್ಸನ್ನು ಮಾಡಿದನು. ಹಾಗೆ ತಪಸ್ಸುಮಾಡಿ, ಈ ಎಲ್ಲವನ್ನೂ ಸೃಷ್ಟಿಸಿದನು. ಯಾವ ಯಾವದಿರುವುದೊ ಅದೆಲ್ಲವನ್ನೂ ಸೃಷ್ಟಿಸಿದನು. ಅದನ್ನೆಲ್ಲಾ ಸೃಷ್ಟಿಸಿ, ಅದನ್ನು ಅನುಪ್ರವೇಶಮಾಡಿದನು. ಹಾಗೆ ಅನು ಪ್ರವೇಶಮಾಡಿ, ಅವನು ನಿರ್ವಿಕಾರಿ-ಚೇತನನೂ, ವಿಕಾರಿ-ಅಚೇತನವೂ ಆದನು; ವಿವಿಧ ನಾಮಯುಕ್ತವಾದ ಅಚೇತನವೂ, ಆ ರೀತಿ ನಾಮವಿಲ್ಲದ ಚೇತನವೂ ಆದನು; ಅಚೇತನಕ್ಕೆ ಆಧಾರಭೂತವಾದ ಚೇತನನೂ, ಅವ ನನ್ನು ಆಶ್ರಯಿಸಿದ ಅಚೇತನವೂ ಆದನು; ಅಜಡಸ್ವರೂಪವೂ ಮತ್ತು ಜಡ ಸ್ವರೂಪವೂ ಆದನು. (ಆ ಸತ್ಯಸ್ವರೂಪನಾದ ಪರಮಾತ್ಮನೇ) ಸತ್ಯ ಮತ್ತು ಅನೃತನಾಗಿ, ತಾನು ಸತ್ಯವಾಗಿಯೇ ಉಳಿದನು. ಆದುದರಿಂದಲೇ ಈ ಸಮಸ್ತವನ್ನೂ ಸತ್ಯವೆನ್ನುವರು. ಈ ವಿಷಯದಲ್ಲಿ ಈ ಶ್ಲೋಕವಿದೆ.

## ಏಳನೆಯ ಅನುವಾಕ

ಈ ಸ್ಥೂಲಚೇತನಾಚೇತನವಿಶಿಷ್ಟಬ್ರಹ್ಮನು ಸೃಷ್ಟಿಗೆ ಮೊದಲು ಸೂಕ್ಷ್ಮ ಚೇತನಾಚೇತನವಿಶಿಷ್ಟಬ್ರಹ್ಮನಾಗಿದ್ದನು. ಆ ಸೂಕ್ಷ್ಮದಿಂದ ಈ ಸ್ಥೂಲವ ಉಂಟಾಯಿತು. ಅದು ತನ್ನನ್ನು ತಾನೇ ಮಾಡಿಕೊಂಡಿತು, (ಅಂದರೆ ಬ್ರಹ್ಮನೇ ಉಪಾದಾನ, ಬ್ರಹ್ಮನೇ ನಿಮಿತ್ತ, ಕಾರ್ಯವೂ ಬ್ರಹ್ಮನೇ.) ಆದುದ ರಿಂದಲೇ ಅದು 'ಸುಕೃತ' ಎನಿಸಿಕೊಳ್ಳುವುದು; (ಅನನ್ಯಾಧೀನವೂ ಅನನ್ಯ ಕಾರ್ಯವೂ ಆದುದರಿಂದ ಬ್ರಹ್ಮನು ಅಕ್ಲಿಷ್ಟಕಾರ್ಯನು.) ಹೀಗೆ ಸುಕೃತ ನೆಂದು ನಿರ್ದಿಷ್ಟನಾದ ಬ್ರಹ್ಮನು ರಸವಾಗಿರುವನು. ಜೀವನು ರಸರೂಪಿ ಬ್ರಹ್ಮನನ್ನು ಹೊಂದಿ ಆನಂದಿಯಾಗುವನು. ಆಕಾಶದಂತೆ ಅಪರಿಮಿತನಾದ ಈ ಬ್ರಹ್ಮನು ಆನಂದವಾಗಿಲ್ಲದಿದ್ದರೆ, ಯಾವನು ತಾನೇ ಸಂಸಾರಿಕಸುಖ ವನ್ನಾಗಲಿ, ಅಪವರ್ಗಸುಖವನ್ನಾಗಲಿ, ಹೊಂದಬಹುದು? ಇವನೇ

ಸರ್ವಚೇತನರನ್ನೂ ಆನಂದಗೊಳಿಸುವನು. ಯಾವಾಗ ಸಾಧಕನು ಈ ಅದೃಶ್ಯನೂ, ಅಶರೀರನೂ, ಶರೀರವಾಚಕ-ಶಬ್ದಾವಾಚ್ಯನೂ, ಆಧಾರಶೂನ್ಯನೂ, ಆದ ಪರಬ್ರಹ್ಮನಲ್ಲಿ ಅಭಯಸಾಧನಭೂತವಾದ ನಿರಂತರಧ್ಯಾನನಿಷ್ಠೆಯನ್ನು ಹೊಂದುವನೊ, ಆಗ ಅವನು ಅಭಯವನ್ನು ಹೊಂದುವನು. ಯಾವಾಗ ಈ ಧ್ಯಾನನಿಷ್ಠೆಯಲ್ಲಿ ಇವನು ಸ್ವಲ್ಪವಾದರೂ ವಿಚ್ಛೇದವನ್ನು ಮಾಡುವನೊ, ಆಗ ಅವನಿಗೆ ಭಯಪ್ರಾಪ್ತಿಯಾಗುವದು. ಬ್ರಹ್ಮೋಪಾಸನನಿಷ್ಠನಿಗೆ, ಅನ್ಯಚಿಂತೆಯೇ ಭಯಕಾರಕ; ಬೇರೆ ಭಯವಿಲ್ಲ.[೧] ಈ ವಿಷಯದಲ್ಲಿ ಈ ಶ್ಲೋಕವಿದೆ.

[[೧]ಮಹರ್ಷಿಗಳು ಹೇಳುತ್ತಾರೆ—ಯನ್ಮುಹೂರ್ತಂ ಕ್ಷಣಂ ವಾಪಿ ವಾಸುದೇವೋ ನ ಚಿಂತ್ಯತೇ । ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಭ್ರಾಂತಿಃ ಸಾ ಚ ವಿಕ್ರಿಯಾ ॥
ವರಂ ಹುತವಹಜ್ವಾಲಾಪಂಜರಾಂತರ್ವ್ಯವಸ್ಥಿತಿಃ । ನ ಶೌರಿಚಿಂತಾವಿಮುಖಜನಸಂವಾಸವೈಶಸಮ್ ॥ ]

## ಎಂಟನೆಯ ಅನುವಾಕ

ಇವನ ಭಯದಿಂದ ವಾಯುವು ಬೀಸುವನು; ಇದೇ ಭಯದಿಂದ ಸೂರ್ಯನು ಸಂಚರಿಸುವನು; ಅಗ್ನಿಯೂ ಇಂದ್ರನೂ ಇವನ ಭಯದಿಂದ ತಮ್ಮ ಕರ್ತವ್ಯನಿಷ್ಠರಾಗಿರುವರು; ಹಾಗೆಯೇ ಪಂಚಮನಾದ ಮೃತ್ಯುವು ಧಾವಿಸುವನು.

ಇದು ಆನಂದದ ಮೀಮಾಂಸೆಯಾಗಿದೆ—ಒಬ್ಬನು ಯುವಕನಾಗಿ ತನ್ನಂತೆ ಯುವಕರಾದ ಇತರರಿಗೆ ಅಧ್ಯಾಪಕನಾಗುವಷ್ಟು ಸರಿಯಾಗಿ ಅಧ್ಯಯನ ಮಾಡುವವನಾಗಿದ್ದರೆ, ಹಾಗೆಯೇ ಆಶಿಷ್ಠನೂ, ದೃಢಿಷ್ಠನೂ, ಬಲಿಷ್ಠನೂ ಆಗಿದ್ದರೆ, ಅವನಿಗೆ ಈ ಪೃಥ್ವಿಯೆಲ್ಲ ವಿತ್ತಪೂರ್ಣವಾಗಿ ವಶವಾಗಿದ್ದೇ ಆದರೆ, ಅವನ ಆನಂದವು ಒಂದು ಮಾನುಷ ಆನಂದ. ಈ ಆನಂದ ಬ್ರಹ್ಮನಿಷ್ಠನೂ, ಕಾಮರಹಿತನೂ, ಆದವನ ಆನಂದದಲ್ಲಿ ಅಂತರ್ಗತವಾಗಿರುವುದು. ನೂರು ಮಾನುಷ ಆನಂದವು ಮನುಷ್ಯಗಂಧರ್ವರ ಒಂದು ಆನಂದ. ಅದೂ ಬ್ರಹ್ಮನಿಷ್ಠನೂ, ಕಾಮರಹಿತನೂ ಆದವನ ಆನಂದದಲ್ಲಿ ಅಂತರ್ಗತವಾಗಿರುವುದು. ನೂರು ಮನುಷ್ಯ ಗಂಧರ್ವರ ಆನಂದವು ದೇವಗಂಧರ್ವರ ಒಂದು

ಆನಂದವಾಗಿರುವುದು. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವುದು. ನೂರು ದೇವಗಂಧರ್ವರ ಆನಂದವು ಚಿರಲೋಕವಾಸಿಗಳಾದ ಪಿತೃಗಳ ಒಂದು ಆನಂದವಾಗಿರುವುದು. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವುದು. ಚಿರಲೋಕವಾಸಿಗಳಾದ ಪಿತೃಗಳ ನೂರು ಆನಂದವು ಆಜಾನಜ ದೇವತೆಗಳ ಒಂದು ಆನಂದವಾಗಿರುವುದು. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವುದು. ಆಜಾನಜದೇವತೆಗಳ ನೂರು ಆನಂದವು ಕರ್ಮದೇವತೆಗಳ ಒಂದು ಆನಂದವಾಗಿದೆ. ಕರ್ಮದಿಂದ ಅವರು ದೇವತೆಗಳೊಂದಿಗೆ ಸಾಯುಜ್ಯಹೊಂದಿರುವರು. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವುದು. ನೂರು ಕರ್ಮದೇವತೆಗಳ ಆನಂದವು ಒಂದು ದೇವಾನಂದವಾಗಿದೆ. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವದು. ನೂರು ದೇವಾನಂದವು ಇಂದ್ರನ ಒಂದು ಆನಂದವಾಗಿದೆ. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವದು. ನೂರು ಇಂದ್ರಾನಂದವು ಬೃಹಸ್ಪತಿಯ ಒಂದು ಆನಂದವಾಗಿದೆ. ಅದೂ ಕಾಮರಹಿತಬ್ರಹ್ಮನಿಷ್ಠನಿಗಿರುವುದು. ನೂರು ಬೃಹಸ್ಪತಿಯ ಆನಂದವು ಪ್ರಜಾಪತಿಯ ಒಂದು ಆನಂದ. ಅದೂ ಕಾಮರಹಿತಬ್ರಹ್ಮನಿಷ್ಠನಿಗೆ ಇರುವುದು. ನೂರು ಪ್ರಜಾಪತಿಯ ಆನಂದವು ಪರಬ್ರಹ್ಮನ ಒಂದು ಆನಂದವಾಗಿದೆ. ಕಾಮರಹಿತಬ್ರಹ್ಮನಿಷ್ಠನು ಈ ಆನಂದವನ್ನು ಹೊಂದಿರುವನು. ಪುರುಷನ ಹೃದಯಾಂತರ್ಯಾಮಿಯಾಗಿರುವವನೂ, ಆದಿತ್ಯನಲ್ಲಿ ಹಿರಣ್ಮಯನಾಗಿ ಪ್ರಕಾಶಿಸುವವನೂ ಒಬ್ಬನೇ.

ಹೀಗೆ ಯಾವನು ತಿಳಿಯುವನೊ, ಅವನು ಈ ಲೋಕವನ್ನು ಬಿಟ್ಟು, ಈ ಅನ್ನಮಯಾತ್ಮನನ್ನು ಸೇರುವನು; ಈ ಪ್ರಾಣಮಯಾತ್ಮನನ್ನು ಸೇರುವನು; ಈ ಮನೋಮಯಾತ್ಮನನ್ನು ಸೇರುವನು. ಈ ವಿಜ್ಞಾನಮಯಾತ್ಮನನ್ನು ಸೇರುವನು; ಈ ಆನಂದಮಯಾತ್ಮನನ್ನು ಸೇರುವನು. ಈ ವಿಷಯದಲ್ಲಿ ಈ ಶ್ಲೋಕವಿದೆ.

## ಒಂಬತ್ತನೆಯ ಅನುವಾಕ

ವಾಕ್ಕು ಮತ್ತು ಮನಸ್ಸು ಯಾವ ಬ್ರಹ್ಮನ ಆನಂದವನ್ನು ಇಷ್ಟೇ ಎಂದು ನಿರ್ಣಯಮಾಡಲು ಹೊರಟು, ಅದರ ಆನಂತ್ಯದ ದೆಸೆಯಿಂದ ವಿಫಲವಾಗಿ ಹಿಂತಿರುಗುವುವೊ, ಆ ಬ್ರಹ್ಮಾನಂದವನ್ನು ತಿಳಿದವನು ಯಾವುದಕ್ಕೂ ಭಯಪಡುವುದಿಲ್ಲ. 'ನಾನು ಸಾಧು ಕರ್ಮವನ್ನು ಏತಕ್ಕೆ ಮಾಡಲಿಲ್ಲ?

ಪಾಪವನ್ನು ಏತಕ್ಕೆ ಮಾಡಿದೆ?' ಎಂಬ ಚಿಂತೆ ಅವನನ್ನು ತಾಪಗೊಳಿಸುವುದಿಲ್ಲ. ಇದನ್ನು ತಿಳಿದವನು ಆ ಎರಡು ತಾಪದ ದೆಸೆಯಿಂದ ಆತ್ಮನನ್ನು ರಕ್ಷಿಸಿಕೊಳ್ಳುವನು. ಹಾಗೆ ತಿಳಿದವನು ಆ ಎರಡರಿಂದಲೂ ಆತ್ಮನನ್ನು ರಕ್ಷಿಸಿಕೊಳ್ಳುವನು. ಇದು ಪರಮರಹಸ್ಯದ ಉಪದೇಶ.

# ಭೃಗುವಲ್ಲೀ

## ಮೊದಲನೆಯ ಅನುವಾಕ

ವರುಣನ ಮಗನಾದ ಭೃಗುವು ತನ್ನ ತಂದೆಯಾದ ವರುಣನಲ್ಲಿ ಬಂದು 'ಹೇ ಭಗವನ್, ನನಗೆ ಬ್ರಹ್ಮನನ್ನು ತಿಳಿಸು' ಎಂದು ಪ್ರಾರ್ಥಿಸಿದನು 'ಅನ್ನ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು' ಎಂದು ಹೇಳಿ ವರುಣನು ಇನ್ನು ಉಪದೇಶಮಾಡಿದನು:

ಯಾವ ಉಪಾದಾನದ ಮತ್ತು ನಿಮಿತ್ತದ ದೆಸೆಯಿಂದ ಈ ಪ್ರಾಣಿಗಳ ಹುಟ್ಟುವುವೊ, ಹಾಗೆ ಹುಟ್ಟಿದವುಗಳು ಯಾವುದರಿಂದ ಜೀವಿಸುವುವೊ ಯಾವುದನ್ನು ಪ್ರವೇಶಿಸುವುವೊ, ಅದನ್ನು ಉಪಾಸಿಸು; ಅದು ಬ್ರಹ್ ಭೃಗುವು ತಪಸ್ಸನ್ನು ಮಾಡಿದನು. ಹಾಗೆ ತಪಸ್ಸನ್ನು ಮಾಡಿ—

## ಎರಡನೆಯ ಅನುವಾಕ

ಅನ್ನವನ್ನು ಬ್ರಹ್ಮನೆಂದು ತಿಳಿದನು. ಅನ್ನದ ದೆಸೆಯಿಂದ ಈ ಪ್ರಾ ಗಳು ಹುಟ್ಟುವುವು; ಹಾಗೆ ಹುಟ್ಟಿದವುಗಳು ಅನ್ನದಿಂದ ಜೀವಿಸುವುವ ಅನ್ನವನ್ನು ಪ್ರವೇಶಿಸುವುವು. ಹಾಗೆ ತಿಳಿದುಕೊಂಡು ಪುನಃ ತಂದೆಯಾ ವರುಣನಲ್ಲಿಗೆ ಬಂದು 'ಹೇ ಭಗವನ್, ನನಗೆ ಬ್ರಹ್ಮನನ್ನು ತಿಳಿಸು' ಎಂದ ಪ್ರಾರ್ಥಿಸಿದನು. ಅವನಿಗೆ ವರುಣನು ಹೇಳಿದನು: 'ತಪಸ್ಸಿನಿಂದ ಬ್ರಹ್ಮನನ ತಿಳಿದುಕೊ; ತಪಸ್ಸೇ ಬ್ರಹ್ಮ.' ಅವನು ತಪಸ್ಸು ಮಾಡಿದನು. ಹಾ ತಪಸ್ಸು ಮಾಡಿ—

## ಮೂರನೆಯ ಅನುವಾಕ

ಪ್ರಾಣವನ್ನು ಬ್ರಹ್ಮನೆಂದು ತಿಳಿದನು. ಪ್ರಾಣದ ದೆಸೆಯಿಂದ ಈ ಪ್ರಾಣಿಗಳು ಹುಟ್ಟುವುವು. (ಹಾಗೆ ಹುಟ್ಟಿದವುಗಳು) ಪ್ರಾಣದಿಂದ ಜೀವಿಸ ವುವು, ಪ್ರಾಣವನ್ನು ಪ್ರವೇಶಿಸುವುವು. ಹಾಗೆ ತಿಳಿದುಕೊಂಡು, ಪುನ ತಂದೆಯಾದ ವರುಣನಲ್ಲಿಗೆ ಬಂದು 'ಹೇ ಭಗವನ್, ನನಗೆ ಬ್ರಹ್ಮನನ ತಿಳಿಸು' ಎಂದು ಪ್ರಾರ್ಥಿಸಿದನು. ಅವನಿಗೆ ವರುಣನು ಹೇಳಿದನು:

'ತಪಸ್ಸಿನಿಂದ ಬ್ರಹ್ಮನನ್ನು ತಿಳಿದುಕೊ; ತಪಸ್ಸೇ ಬ್ರಹ್ಮ.' ಅವನು ತಪಸ್ಸನ್ನು ಮಾಡಿದನು. ಹಾಗೆ ತಪಸ್ಸು ಮಾಡಿ—

## ನಾಲ್ಕನೆಯ ಅನುವಾಕ

ಮನಸ್ಸನ್ನು ಬ್ರಹ್ಮನೆಂದು ತಿಳಿದನು. ಮನಸ್ಸಿನ ದೆಸೆಯಿಂದ ಈ ಪ್ರಾಣಿಗಳು ಹುಟ್ಟುವುವು; ಹಾಗೆ ಹುಟ್ಟಿದವುಗಳು ಮನಸ್ಸಿನಿಂದ ಜೀವಿಸುವುವು, ಮನಸ್ಸನ್ನು ಪ್ರವೇಶಿಸುವುವು. ಹಾಗೆ ತಿಳಿದುಕೊಂಡು ಪುನಃ ತಂದೆಯಾದ ವರುಣನಲ್ಲಿಗೆ ಬಂದು 'ಹೇ ಭಗವನ್' ನನಗೆ ಬ್ರಹ್ಮನನ್ನು ತಿಳಿಸು' ಎಂದು ಪ್ರಾರ್ಥಿಸಿದನು. ಅವನಿಗೆ ವರುಣನು ಹೇಳಿದನು:

'ತಪಸ್ಸಿನಿಂದ ಬ್ರಹ್ಮನನ್ನು ತಿಳಿ; ತಪಸ್ಸೇ ಬ್ರಹ್ಮ.' ಅವನು ತಪಸ್ಸನ್ನು ಮಾಡಿದನು. ಹಾಗೆ ತಪಸ್ಸು ಮಾಡಿ—

## ಐದನೆಯ ಅನುವಾಕ

ವಿಜ್ಞಾನವನ್ನು ಬ್ರಹ್ಮನೆಂದು ತಿಳಿದನು. ವಿಜ್ಞಾನದಿಂದ ಈ ಪ್ರಾಣಿಗಳು ಹುಟ್ಟುವುವು; (ಹಾಗೆ ಹುಟ್ಟಿದವುಗಳು) ವಿಜ್ಞಾನದಿಂದ ಜೀವಿಸುವುವು, ವಿಜ್ಞಾನವನ್ನು ಪ್ರವೇಶಿಸುವುವು. ಹಾಗೆ ತಿಳಿದುಕೊಂಡು ಪುನಃ ತಂದೆಯಾದ ವರುಣನಲ್ಲಿಗೆ ಬಂದು 'ಹೇ ಭಗವನ್, ನನಗೆ ಬ್ರಹ್ಮನನ್ನು ತಿಳಿಸು' ಎಂದು ಪ್ರಾರ್ಥಿಸಿದನು.

ಅವನಿಗೆ ವರುಣನು ಹೇಳಿದನು: 'ತಪಸ್ಸಿನಿಂದ ಬ್ರಹ್ಮನನ್ನು ತಿಳಿದುಕೊ; ತಪಸ್ಸೇ ಬ್ರಹ್ಮ.' ಅವನು ತಪಸ್ಸುಮಾಡಿದನು. ಹಾಗೆ ತಪಸ್ಸುಮಾಡಿ—

## ಆರನೆಯ ಅನುವಾಕ

ಆನಂದವನ್ನು ಬ್ರಹ್ಮನೆಂದು ತಿಳಿದನು. ಆನಂದದ ದೆಸೆಯಿಂದ ಈ ಭೂತಗಳು ಹುಟ್ಟುವುವು; (ಹಾಗೆ ಹುಟ್ಟಿದವುಗಳು) ಆನಂದದಿಂದ ಜೀವಿಸುವುವು, ಆನಂದವನ್ನು ಪ್ರವೇಶಿಸುವುವು. ಇದು ಭಾರ್ಗವೀ ವಾರುಣೀ ವಿದ್ಯೆ. ಪರಮವ್ಯೋಮರೂಪಿಬ್ರಹ್ಮನಲ್ಲಿ ಪ್ರತಿಷ್ಠಿತವಾಗಿದೆ. ಯಾವನು ಇದನ್ನು ತಿಳಿಯುವನೊ, ಅವನು ಪ್ರತಿಷ್ಠಿತನಾಗುವನು. ಅವನು ಅನ್ನವಂತ

ನಾಗುವನು; ಅನ್ನವನ್ನು ಸೇವಿಸುವವನಾಗುವನು; ಸಂತತಿ, ಪಶುಗಳ ಬ್ರಹ್ಮವರ್ಚಸ್ಸು, ಇವುಗಳಿಂದ ಅವನು ಮಹಾನ್ ಆಗುವನು; ಕೀರ್ತಿಯಿಂ ಮಹಾನ್ ಆಗುವನು.

## ಏಳನೆಯ ಅನುವಾಕ

ಅನ್ನವನ್ನು ನಿಂದಿಸಬಾರದು. ಅದು ವ್ರತ. ಪ್ರಾಣವು ಅನ್ನ ಶರೀರವು ಅನ್ನವನ್ನು ತಿನ್ನುವುದು. ಪ್ರಾಣದಲ್ಲಿ ಶರೀರವು ಪ್ರತಿಷ್ಠಿತವಾಗಿದೆ ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿದೆ. ಹೀಗೆ ಅನ್ನವು ಅನ್ನದಲ್ಲಿ ಪ್ರತಿಷ್ಠಿ ವಾಗಿದೆ. ಯಾವನು ಅನ್ನದಲ್ಲಿ ಅನ್ನವು ಪ್ರತಿಷ್ಠಿತವಾಗಿರುವುದೆಂದು ತಿಳಿಯು ವನೊ ಅವನು ಪ್ರತಿಷ್ಠಿತನಾಗುವನು. ಅನ್ನವಂತನಾಗುವನು; ಅನ್ನವನ್ ಸೇವಿಸುವವನಾಗುವನು. ಸಂತತಿ, ಪಶು, ಬ್ರಹ್ಮವರ್ಚಸ್ಸು ಇವುಗಳಿಂ ಅವನು ಮಹಾನ್ ಆಗುವನು; ಕೀರ್ತಿಯಿಂದ ಮಹಾನ್ ಆಗುವನು.

## ಎಂಟನೆಯ ಅನುವಾಕ

ಅನ್ನವನ್ನು ನಿರಾಕರಿಸಬಾರದು. ಅದು ವ್ರತ. ನೀರು ಅನ್ನ ಜ್ಯೋತಿಯು ಅನ್ನವನ್ನು ತಿನ್ನುವುದು. ನೀರಿನಲ್ಲಿ ಜ್ಯೋತಿಯು ಪ್ರತಿಷ್ಠಿ ವಾಗಿದೆ. ಜ್ಯೋತಿಯಲ್ಲಿ ನೀರು ಪ್ರತಿಷ್ಠಿತವಾಗಿದೆ. ಹೀಗೆ ಅನ್ನವು ಅನ್ನದ ಪ್ರತಿಷ್ಠಿತವಾಗಿದೆ. ಯಾವನು ಹೀಗೆ ಅನ್ನವು ಅನ್ನದಲ್ಲಿ ಪ್ರತಿಷ್ಠಿತವೆಂದ ತಿಳಿಯುವನೊ, ಅವನು ಅನ್ನವಂತನಾಗುವನು; ಅನ್ನವನ್ನು ಸೇವಿಸುವನು ಸಂತತಿ, ಪಶು, ಬ್ರಹ್ಮವರ್ಚಸ್ಸು, ಇವುಗಳಿಂದ ಮಹಾನ್ ಆಗುವನು ಕೀರ್ತಿಯಿಂದ ಮಹಾನ್ ಆಗುವನು.

## ಒಂಬತ್ತನೆಯ ಅನುವಾಕ

ಅನ್ನವನ್ನು ಬಹುವಾಗಿ ಮಾಡಬೇಕು. ಅದು ವ್ರತ. ಪೃಥಿವೀ ಅನ್ನ ಆಕಾಶವು ಅನ್ನವನ್ನು ತಿನ್ನುವುದು. ಪೃಥಿವಿಯಲ್ಲಿ ಆಕಾಶವು ಪ್ರತಿಷ್ಠಿತವಾಗಿದೆ ಆಕಾಶದಲ್ಲಿ ಪೃಥಿವಿಯು ಪ್ರತಿಷ್ಠಿತವಾಗಿದೆ. ಹೀಗೆ ಅನ್ನದಲ್ಲಿ ಅನ್ನ ಪ್ರತಿಷ್ಠಿತವಾಗಿದೆ. ಯಾವನು ಹೀಗೆ ಅನ್ನದಲ್ಲಿ ಅನ್ನವು ಪ್ರತಿಷ್ಠಿತವಾಗಿದೆ ಎಂದ ತಿಳಿಯುವನೊ, ಅವನು ಪ್ರತಿಷ್ಠಿತನಾಗುವನು, ಅನ್ನವಂತನಾಗುವನು

ಅನ್ನವನ್ನು ಸೇವಿಸುವನು. ಸಂತತಿ, ಪಶು, ಬ್ರಹ್ಮವರ್ಚಸ್ಸು, ಇವುಗಳಿಂದ ಮಹಾನ್ ಆಗುವನು; ಕೀರ್ತಿಯಿಂದ ಮಹಾನ್ ಆಗುವನು.

## ಹತ್ತನೆಯ ಅನುವಾಕ

ಅನ್ನಾರ್ಥವಾಗಿ ಬಂದ ಯಾವನನ್ನೂ ನಿರಾಕರಿಸಬಾರದು. ಇದು ವ್ರತ. ಆದುದರಿಂದ ಯಾವ ರೀತಿಯಲ್ಲಾದರೂ ಬಹು ಅನ್ನವನ್ನು ಮಾಡಬೇಕು. ಇಂತಹ ಉಪಾಸಕನಿಗಾಗಿಯೇ ಅನ್ನವು ಇರುವುದು. ಸರ್ವ ಅವಯುವ ಸಂಪೂರ್ಣವಾದ ಅನ್ನವು ಇವನಿಗೋಸ್ಕರ ಸಿದ್ಧವಾಗಿರುವುದು. ಸಂತರು ಹೀಗೆ ಹೇಳುವರು.

ಯಾವನು ಹೀಗೆ ತಿಳಿಯುವನೋ ಅವನು ಯಾವ ರೀತಿಯಲ್ಲಾದರೂ ಬಹು ಅನ್ನವನ್ನು ಹೊಂದಿಸಬೇಕು. ಈ ಮಾತು ಕ್ಷೇಮಕಾರಿ. ಪ್ರಾಣಾಪಾನಗಳಲ್ಲಿ ಯೋಗಕ್ಷೇಮವೆಂದೂ, ಹಸ್ತಗಳಲ್ಲಿ ಕರ್ಮವೆಂದೂ, ಪಾದಗಳಲ್ಲಿ ಗತಿಯೆಂದೂ ಪಾಯುವಿನಲ್ಲಿ ವಿಸರ್ಗವೆಂದೂ, ಮನುಷ್ಯಸಂಬಂಧಿ ಉಪಾಸನೆಗಳು.

ಅನಂತರ ದೈವೀ ಉಪಾಸನೆಗಳು: ವೃಷ್ಟಿಯಲ್ಲಿ ತೃಪ್ತಿಯೆಂದೂ, ವಿದ್ಯುತ್ತಿನಲ್ಲಿ ಬಲವೆಂದೂ, ಪಶುಗಳಲ್ಲಿ ಯಶಸ್ಸೆಂದೂ, ನಕ್ಷತ್ರಗಳಲ್ಲಿ ಜ್ಯೋತಿಸ್ಸೆಂದೂ, ಉಪಸ್ಥದಲ್ಲಿ ಪ್ರಜನನಮಿತ್ತ ಆನಂದವೆಂದೂ, ಆಕಾಶದಲ್ಲಿ ಸರ್ವವೆಂದೂ, ಉಪಾಸನೆಗಳು.

ಆಕಾಶದಲ್ಲಿ ಸರ್ವವೂ ಪ್ರತಿಷ್ಠಿತವೆಂದು ಉಪಾಸನೆ ಮಾಡಬೇಕು; ಉಪಾಸಕನು ಪ್ರತಿಷ್ಠಿತನಾಗುವನು. 'ಮಹಃ' ಎಂದು ಉಪಾಸನೆಮಾಡಬೇಕು; ಉಪಾಸಕನು ಮಹಾನ್ ಆಗುವನು. 'ಮನಃ' ಎಂದು ಉಪಾಸನೆ ಮಾಡಬೇಕು; ಉಪಾಸಕನು ಮಾನವಂತನಾಗುನು. 'ನಮಃ' ಎಂದು ಉಪಾಸನೆಮಾಡಬೇಕು; ಉಪಾಸಕನಿಗೆ ಸರ್ವಕಾಮಗಳೂ ಬಗ್ಗುವುವು. ಅದನ್ನು ಬ್ರಹ್ಮಸೆಂದು ಉಪಾಸನೆ ಮಾಡಬೇಕು; ಉಪಾಸಕನು ಬ್ರಹ್ಮವಂತನಾಗುವನು. ಆಕಾಶವು ಬ್ರಹ್ಮನ ಸರ್ವೋಪಸಂಹಾರಕ್ಕೂ ಆಶ್ರಯವೆಂದು ಉಪಾಸನೆಮಾಡಬೇಕು; ಉಪಾಸಕರನ ದ್ವೇಷಿಗಳೂ, ಸಪತ್ನರೂ ಅಪ್ರಿಯರೂ, ಭ್ರಾತೃವ್ಯರೂ, ಸರ್ವತಃ ನಾಶಹೊಂದುವರು.

ಪುರುಷನಲ್ಲಿ ಅಂತರ್ಯಾಮಿಯಾಗಿರುವವನೂ, ಆದಿತ್ಯನಲ್ಲಿ ಅಂತರ್ಯಾಮಿಯಾಗಿರುವವನೂ, ಒಬ್ಬನೆ. ಯಾವನು ಹೀಗೆ ತಿಳಿಯುವನೊ, ಅವನು ಈ ಲೋಕವನ್ನು ಬಿಟ್ಟ ಮೇಲೆ ಈ ಅನ್ನಮಯ ಆತ್ಮನನ್ನು ಸೇರಿ, ಈ ಪ್ರಾಣಮಯ ಆತ್ಮನನ್ನು ಸೇರಿ, ಈ ಮನೋಮಯ ಆತ್ಮನನ್ನು ಸೇರಿ, ಈ ವಿಜ್ಞಾನಮಯ ಆತ್ಮನನ್ನು ಸೇರಿ, ಈ ಆನಂದಮಯ ಆತ್ಮನನ್ನು ಸೇರಿ, ಕಾಮಾನ್ನಿಯಾಗಿ, ಕಾಮರೂಪಿಯಾಗಿ, ಈ ಲೋಕಗಳನ್ನು ಅನುಸಂಚರಿಸುವವನಾಗಿ, 'ಹಾವೂ, ಹಾವೂ, ಹಾವೂ' ಎಂದು ಸಾಮಗಾಯನವನ್ನು ಮಾಡುವವನಾಗಿರುವನು.

ನಾನು (ಪರಮಾತ್ಮನು) ಭೋಗ್ಯನು; ನಾನು ಭೋಕ್ತೃವು; ನಾನು ಶ್ಲಾಘನೀಯ ಜಗದ್ರಕ್ಷಣಾದಿಕರ್ತಾ; ಋತರೂಪಿಕರ್ಮದ ಪರಿಪಾಕವನ್ನು ಸೃಷ್ಟಿಗೆ ಮೊದಲೇ ಮಾಡುವವನು ನಾನು. ದೇವತೆಗಳಿಗೂ ಪೂರ್ವವಾದ ಮೋಕ್ಷವೆಂಬ ಅಮೃತಕ್ಕೆ ನಾನು ಆಶ್ರಯಭೂತನು. ಯಾವನು ನನ್ನನ್ನು ಯೋಗ್ಯನಾದ ಶಿಷ್ಯನಿಗೆ ದಾನಮಾಡುವನೊ, ಅವನೇ ನನ್ನನ್ನು ಸೇರುವನು. ನಾನು ಪ್ರಕೃತಿಪುರುಷರನ್ನು ವ್ಯಾಪಿಸುವೆನು. ನಾನು ಪ್ರಳಯ ಕಾಲದಲ್ಲಿ ವಿಶ್ವವನ್ನು ಅಭಿಭವಗೊಳಿಸುವೆನು. ಯಾವನು ಇದನ್ನು ತಿಳಿಯುವನೊ, ಅವನು ಸುವರ್ಣಜ್ಯೋತಿಯಾಗುವನು. ಹೀಗೆಂದು ಉಪನಿಷತ್ತು.

ಹರಿಃ ಓಮ್

# ಮಂತ್ರಗಳ ಅಕಾರಾದಿಸೂಚಿ


| ಮಂತ್ರ | ವಲ್ಲಿ. | ಅನು. | ಪುಟ. | ಮಂತ್ರ | ವಲ್ಲಿ. | ಅನು. | ಪುಟ. |
|---|---|---|---|---|---|---|---|
| ಅನ್ನಂ ನ ನಿಂದ್ಯಾತ್ | ೩ | ೭ | ೮೪ | ಭೂರ್ಭುವಃ ಸುವಃ | ೧ | ೫ | ೨೩ |
| ಅನ್ನಂ ನ ಪರಿಚಕ್ಷೀತ | ೩ | ೮ | ೮೬ | ಭೃಗುರ್ವೈ | ೩ | ೧ | ೭೫ |
| ಅನ್ನಂ ಬಹು ಕುರ್ವೀತ | ೩ | ೯ | ೮೭ | ಮನೋ ಬ್ರಹ್ಮೇತಿ | ೩ | ೪ | ೮೦ |
| ಅನ್ನಂ ಬ್ರಹ್ಮೇತಿ | ೩ | ೨ | ೭೭ | ಯತೋ ವಾಚೋ | ೨ | ೪ | ೫೪ |
| ಅನ್ನಾದ್ವೈ ಪ್ರಜಾಃ | ೨ | ೨ | ೪೮ | ಯತೋ ವಾಚೋ | ೨ | ೯ | ೭೩ |
| ಅಸದ್ವಾ | ೨ | ೭ | ೬೪ | ಯಶ್ಛಂದಸಾಂ | ೧ | ೪ | ೧೯ |
| ಅಸನ್ನೇವ ಸ | ೨ | ೬ | ೫೯ | ವಿಜ್ಞಾನಂ ಬ್ರಹ್ಮೇತಿ | ೩ | ೫ | ೮೧ |
| ಅಹಂ ವೃಕ್ಷಸ್ಯ | ೧ | ೧೦ | ೩೭ | ವಿಜ್ಞಾನಂ ಯಜ್ಞಂ | ೨ | ೫ | ೫೬ |
| ಆನಂದೋ ಬ್ರಹ್ಮೇತಿ | ೩ | ೬ | ೮೨ | ವೇದಮನೂಚ್ಯ | ೧ | ೧೧ | ೩೯ |
| ಋತಂ ಚ | ೧ | ೯ | ೩೪ | ಶಂ ನೋ ಮಿತ್ರಃ | ೧ | ೧ | ೧೧ |
| ಓಮಿತಿ ಬ್ರಹ್ಮ | ೧ | ೮ | ೩೨ | ಶಂ ನೋ ಮಿತ್ರಃ | ೧ | ೧೨ | ೪೩ |
| ನ ಕಂಚನ ವಸತೌ | ೩ | ೧೦ | ೮೮ | ಶೀಕ್ಷಾಂ ವ್ಯಾಖ್ಯಾಸ್ಯಾಮಃ | ೧ | ೨ | ೧೪ |
| ಪೃಥಿವ್ಯಂತರಿಕ್ಷಂ | ೧ | ೭ | ೩೦ | ಸ ಯ ಏಷೋಽಂತರ್ಹೃ-ದಯಃ | ೧ | ೬ | ೨೭ |
| ಪ್ರಾಣಂ ದೇವಾ ಅನು | ೨ | ೩ | ೫೧ | ಸಹ ನಾವವತು | ೨ | ೧ | ೪೪ |
| ಪ್ರಾಣೋ ಬ್ರಹ್ಮೇತಿ | ೩ | ೩ | ೭೯ | ಸಹ ನೌ ಯಶಃ | ೧ | ೩ | ೧೫ |
| ಬ್ರಹ್ಮವಿದಾಪ್ನೋತಿ | ೨ | ೧ | ೪೫ | | | | |
| ಭೀಷಾಽಸ್ಮಾದ್ವಾತಃ | ೨ | ೮ | ೬೭ | | | | |

# ಉಪನಿಷನ್ಮಾಲೆ

ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ

| | |
|---|---|
| ಈಶಾವಾಸ್ಯೋಪನಿಷತ್ . . | ೦·೫೦ |
| ಕೇನೋಪನಿಷತ್ . . | ೦·೫೦ |
| ಕಠೋಪನಿಷತ್ . . | ೧·೫೦ |
| ಪ್ರಶ್ನೋಪನಿಷತ್ . . | ೧·೦೦ |
| ಮುಂಡಕೋಪನಿಷತ್ . . | ೧·೦೦ |

# ಶ್ರೀಮದ್ಭಗವದ್ಗೀತಾ

ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ

ಪುಟಗಳು ೩೮೨ ಬೆಲೆ ೩·೫೦

ಬೆಲೆ: ರೂ. ೧·೫೦